ಶ್ರೀ.

# ...ೃಶಾನುವಿಶ್ವಾವಸುಸಂವಾದ


ಎಂ. ಅನಂತನಾರಾಯಣಶಾಸ್ತ್ರೀ

ಎಂ. ರಾಮಶೇಷಶಾಸ್ತ್ರೀ



ಬೆಂಗಳೂರು:

... ಮುದ್ರಾಲಯದಲ್ಲಿ ಮುದ್ರಿಸಲ್ಪಟ್ಟಿತು.

...912






ಕ್ರಯ ಆಣೆ ೧೦]

ಶ್ರೀ

ಶ್ರೀ ಲಕ್ಷ್ಮೀನೃಸಿಂಹೋವ್ಯಾನ್ನಃ

# ಕೃಶಾನುವಿಶ್ವಾವಸುಸಂವಾದಃ



ಅಯಂ ಗ್ರಂಥಃ

ಶ್ರೀಮದಖಿಲಭಾಷಾಮಾತೃಭೂತಗೀರ್ವಾಣಭಾಷಾ-
ಭೂಷಾಯಮಾಣಸ್ಯ, ಶ್ರುತಿಸ್ಮೃತಿಪಾರಂಗತಸ್ಯ,
ಷಡ್ದರ್ಶನೀಧುರೀಣಸ್ಯ, ಮದ್ದೂರುಕುಲಪಯಃಪಾ
ರಾವಾರಸಂಭೂತರಾಕಾಸುಧಾಕರಸ್ಯ, ಶ್ರೀಮದ
ದ್ವೈತತತ್ವಜ್ಞಶಿಖಾಮಣೇಃ ಮಹಾದೇವಯೋಗೀ
ಶ್ವರಸ್ಯ

ತನುಜನ್ಮನಃ

ಮದ್ದೂರು:—ಲಕ್ಷ್ಮೀನೃಸಿಂಹಶಾಸ್ತ್ರಿಣಃ
ಆತ್ಮಜೇನ

ಮದ್ದೂರು:—ಅನಂತನಾರಾಯಣಶರ್ಮಣಾ
ತತ್ಸೋದರ್ಯೇಣ

ಮದ್ದೂರು:—ರಾಮಶೇಷಶರ್ಮಣಾಚ
ಪ್ರಣೀತಃ

ಕಲ್ಯಾಣಪುರ್ಯಾಂ ಮುದ್ರಾಪಿತಃ ಪ್ರಕಾಶಿತಶ್ಚ ಸರ್ವ ವಿಜಯತೇತರಾಮ್



1912.

To

**BRAHMASRI MADDUR MAHADEVA SASTRI**

*Philosopher, Scholar,*

The True Exponent of the Ideal System of Yoga and Philosophy as laid down by the Venerable Saints and Prophets of the Bharata Varsha, Exemplar of strict Asceticism amidst Mundane Environments

and

Emblem of Peace, Harmony and Nirvana

---

This Humble Work

**Is dedicated by the Authors**

As a token of Deep Veneration and Adoration for his Inimitable and Incomparable Qualities.

---

# PREFACE.

In presenting this work to the public, the aim of the authors has been to place before them in clear, simple, and modern Kanarese the treasures of knowledge gathered into an antique Sanskrit Manual *Viswagunadarsa* by an eminent scholar and poet named Venkatadhwari.

The original, it cannot be denied, has for years been deservedly enjoying a pretty wide reputation among the Sanskrit-knowing public as a highly instructive and interesting dialogue. In order to make it useful even to those not conversant with Sanskrit, and thus extend its popularity to a wider circle, the present rendering in the form of a dialogue was compiled by the undersigned at the instance of many a learned friend.

To give a brief idea of this work, it is, as the name implies, "A mirror wherein one can see the excellences as well as the defects

of the Universe;" the first object of discussion is the Sun identical with the Supreme Being; next follow the various countries of antiquity together with places of pilgrimage; then the different schools of philosophy, and lastly the various Indian sciences.

Needless it is to remark that nothing has been added to or taken away from the original and that no pains have been spared to make the rendering as easy and diverting as possible.

The work has been entitled "KRISHANU VISWAWASU SAMVADA" so as to enable the casual reader to understand its nature at first sight.

In fine, we only hope that the present work will seldom fail to be of interest to those for whom it is intended, and command a wider circulation than the original itself.

Suggestions toward the improvement of the work will be heartily welcomed.

LAKSHMI NRISIMHASADAN
*Bangalore, 1st Sept. 1912.*

M. ANANTANARAYANA SASTRI
AND
M. RAMASESHA SASTRI.



# OPINIONS.

B. Suryanarain Row Esq., B. A., M. R. A. S., Editor of the *Astrological Magazine*, *Bhoutika Kalanidhi* etc., *Suryalaya* Madras, N. E., writes on the 9th Jany. 1912:—

"I had the pleasure of hearing the Kannada Translation of *Krishanu Visvawasu Samvada* by B. R. Ry. M. Anantanarayana Sastrulu Garu and B. R. Ry. M. Ramasesha Sastrulu Garu of the famous Sanskrit work Viswagunadarsa. The rendering is easy, flowing, and graceful and the Translators have taken care to bring out the full force of the Original Text. Such Vernacular translations of well-recognized Sanskrit works will supply a greatly felt want and I am sure this work will be readily welcomed by all lovers of Kannada literature. The use of a large number of Sanskrit words is almost unavoidable in dealing with Philosophical and Vedantic ideas, but their number could be as far minimised as could be consistent with the efficacy of Kannada translation. The work ought to be printed and circulated."

---

Dr. M. Ramaswamy, D.M.T., D.S.T., B.Sc. (Mental), Ph.B., Joint Secretary, Co-operative Union of India Ltd., of Calcutta, Bangalore, writes on the 10th Jany. 1912:—

"*Viswagunadarsam:*—The Kanarese rendering of this book, under review, is a nice translation of the original and fills in a great desideratum in this species of literature especially in Kanarese. The language is terse, compact, and concise. Although at times it takes a classi-

cal turn of expression it adds to the majesty of the diction and in a language like Kanarese its ingress in such a philosophical and moral discourse as the work embraces cannot wholly be avoided without prejudice to the import of the spirit of the original.

On the whole the young authors are to be congratulated on their laudable and selfless enterprise and the work ought to be received in good earnest by the Karnataka public for whom it is designed."

---

K. Ramaswamiah Esq, Secretary, B. C. L. Ry., Bangalore, writes on the 16 th May 1912.

"The young authors have taken care to see that the original does not suffer in its translation into easy and flowing Canarese and they deserve to be congratulated for it. Viswagunâdarsam supplies a much felt want and it is sincerely to be hoped that it is the first of a series to follow. As the latter depends entirely upon the amount of encouragement and patronage the present publication receives at the hands of the public, it behoves every true lover of his mother tongue and mother country to do his best for it."

---

Brahamsri P. Sundara Sastrulu Garu, Kanarese Pundit, St. Joseph's College, Bangalore, and Secretary to the Sri Geervana Vanivilasa Sabha, Chamarajendra Sanskrit College, Bangalore, writes on the 5th August 1912.—

# ಪ್ರಶಸ್ತಿಪತ್ರಂ.

ಶ್ರೀಪರೀಧಾವಿಸಂ|| ನಿಜಾಷಾಢಕೃಷ್ಣ ೭ ಇಂದುವಾಸರಃ

ಶ್ರೀಮತಾಅನಂತನಾರಾಯಣಶಾಸ್ತ್ರಿಣಾತದನುಜೇನ ಶ್ರೀಮತಾರಾಮಶೇಷಶಾಸ್ತ್ರಿಣಾಚಕರ್ಣಾಟಭಾಷಯಾ ಪರಿವರ್ತಿತಂ "ಕೃಶಾನುಪಿಶ್ವಾವಸುಸಂವಾದಾಖ್ಯಂ" ಗದ್ಯಪ್ರಬಂಧಮುಹಮಾಮೂಲಾಗ್ರಂ ವ್ಯಲೋಕಯಮ್| ಅಯಂ ಗ್ರಂಥಃ ಮನೋಜ್ಞೈಸ್ಸಂಸ್ಕೃತಕರ್ಣಾಟೋಭಯಪದವಿನ್ಯಾಸೈರ್ಮೂಲಗ್ರಂಥಕರ್ತುರ್ವೇಂಕಟಾಧ್ವರಿಕವೇರಭಿಪ್ರಾಯಂ ನಾತಿಗೂಢಂ ಪ್ರಕಾಶಯನ್ ಗೀರ್ವಾಣಭಾಷಾನಭಿಜ್ಞಾನಾಂ ಲೋಕಸ್ಥಿತಯಾವದ್ವಸ್ತುಗುಣದೋಷಜಿಜ್ಞಾಸೂನಾಂ ಸರ್ವೇಷಾಮಪ್ಯತೀವ ಹೃದಯಂಗಮೋವಿದುಷಾಮಪ್ಯತೀವಾಹ್ಲಾದಜನಕಶ್ಚ | ಅಧುನಾರಾಜಕೀಯಪಾಠಶಾಲಾಸು ಪ್ರಥಮಪ್ರವೇಶಪರೀಕ್ಷಾರ್ಥಂ ಕರ್ಣಾಟಭಾಷಾಮಭ್ಯಸ್ಯತಾಂ ಬಾಲಾನಾಂ ಗದ್ಯಪ್ರಬಂಧತ್ವೇನ ನಿಯಮಿತಶ್ಚೇತ್ ಏತದ್ಗ್ರಂಥಪ್ರಣೇತ್ರೋಶ್ಶ್ರಮಸ್ಸಫಲೀಭವೇದಿತ್ಯಾಶಾಸ್ತೇ ಸಾದರಂ ಸಾನಂದಂ ಚೇತಿ ಶಿವಂ ||

---

K. N. Srinivasan Esq. G. B. V. C., M. R. I. P. H. (Lond) Veterinary Surgeon, Bangalore, writes on the 17th August 1912:—

"I have no hesitation in saying that the book has been admirably written in Kanarese. It is with great interest I went through the whole book which is a notable one from every point of view. One who turns the first page, I am quite sure, will not lay the book down until he reads to the end. I earnestly commend this little book to the general public for whom it is purely intended."

---

Brahmasri B. Bhaskara Sastrulu Garu, Sanskrit Pandit, Government High School, Tumkur, writes on the 11th August 1912:—

ಶ್ರೀರಸ್ತು.

ಶ್ರೀಮದನಂತನಾರಾಯಣ ರಾಮಶೇಷಶಾಸ್ತ್ರಿಭ್ಯಾಂ ರಚಿತಂ ಕೃಶಾನುವಿಶ್ವಾವಸುಸಂವಾದಾಖ್ಯಂ ಗ್ರಂಥಮಾಮೂಲಾಗ್ರಮವಾಲೋಕಯಂ ಅಯಂತಾವತ್ ಸಂಸ್ಕೃತಚಂಪೂಗ್ರಂಥೇಷು ಪ್ರಖ್ಯಾತಸ್ಯ ವಿಶ್ವಗುಣಾದರ್ಶಸ್ಯ ಕರ್ಣಾಟಭಾಷಾವಿವರ್ತರೂಪೇಣ ವರ್ತತೇ. ಅಸ್ಮಿನ್ ಮೂಲಗ್ರಂಥಸ್ಯ ಭಾವಸ್ಸಮ್ಯಕ್ಪ್ರದರ್ಶಿತ ಆಸ್ತೇ. ಕಲ್ಯಾಣಪುರಮಧ್ಯವಿದ್ಯೋತಮಾನಸ್ಯ ಮಹಾಯೋಗಿಶಿಖಾಮಣೇಃ ಕವಾಟಪುರ (ಬಾಗಲೂರು) ಮಹಾದೇವಶಾಸ್ತ್ರಿಣಃ ಪೌತ್ರತ್ವಭಾಗಧೇಯಾತ್ ಆಭ್ಯಾಂ ಅಸ್ಮಿನ್ ಗ್ರಂಥೇ ತತ್ರತತ್ರ ವೇದಾಂತಭಾಗಃ ನಿಪುಣಂ ಪ್ರಕಾಶಿತಃ.

ಅಯಂ ಗ್ರಂಥಃ ನ ಕೇವಲಂ ಕರ್ಣಾಟಭಾಷಾಧ್ಯೇತೃಣಾಂ ಅಪಿತು ಗೀರ್ವಾಣಭಾಷಾಧ್ಯೇತೃಣಾಮಪಿ ಮೂಲಭೂತವಿಶ್ವಗುಣಾದರ್ಶಾರ್ಥಪರಿಜ್ಞಾನಾಯ ಮಹಾಂತಮುಪಕಾರಂ ಕರಿಷ್ಯತೀತಿ ಮನ್ಯೇ। ಉದಾರಾಶಯಾನಾಂ ಮಹತಾಂ ಸಾಹಾಯ್ಯಲಾಭೇಸತಿ ಏತಾವೇವಮೇವ ಲೋಕೋಪಕಾರಚಣಾನ್ ಗೀರ್ವಾಣಗ್ರಂಥಾನ್ ದೇಶಭಾಷಾಯಾಂ ವಿಲಿಖ್ಯ ಪ್ರಚಾರಯೇಯುರಿತಿ ಪ್ರತ್ಯೇಮಿ. ಆಶಾಸೇಚ ಏತಯೋರಭಿವೃದ್ಧಿಮ್.

ಇತ್ಥಂ.

ತುಮಕೂರು ರಾಜಕೀಯಾಂಗ್ಲೇಯಪಾಠಶಾಲಾಧ್ಯಾಪಕಃ

ಭಾಸ್ಕರಶಾಸ್ತ್ರೀ.

ಶ್ರೀಃ

ಲಕ್ಷ್ಮೀನೃಸಿಂಹೋವ್ಯಾನ್ನಃ



# ಕೃಶಾನು ವಿಶ್ವಾವಸು ಸಂವಾದ.

---

ಶ್ಲೋ॥ ಕರಾರವಿಂದೇನ ಪದಾರವಿಂದಂ ಮುಖಾರವಿಂದೇ ವಿನಿವೇಶಯನ್ತಂ ।
ವಟಸ್ಯಪತ್ರಸ್ಯ ಪುಟೇಶಯಾನಂ ಬಾಲಂ ಮುಕುಂದಂ ಮನಸಾಸ್ಮರಾಮಿ ॥

ಉಚ್ಚೈರ್ಗತಿರ್ಜಗತಿ ಸಿದ್ಧ್ಯತಿ ಧರ್ಮತಶ್ಚೇತ್ ।
ತಸ್ಯ ಪ್ರಮಾಚವಚನೈಃ ಕೃತ ಕೇತರೈಶ್ಚೇತ್ ।
ತೇಷಾಂ ಪ್ರಕಾಶನ ದಶಾ ಚ ಮಹೀಸುರೈಶ್ಚೇತ್ ।
ತಾನನ್ತರೇಣ ಪತೇ ತ್ಕ್ವನುಮತ್ಪ ಣಾಮಃ ॥ ೨ ॥

ಬಂದಾನೊಂದು ಕಾಲದಲ್ಲಿ ಸಮಾನವೇಷವುಳ್ಳ ಕೃಶಾನುವು ವಿಶ್ವಾವಸುವೆಂಬಿಬ್ಬರು ಗಂಧರ್ವರು ಚರಾಚರಾತ್ಮಕವಾದ ಜಗತ್ತನ್ನು ನೋಡಲಿಚ್ಛಿಸಿ ಅಂತರಿಕ್ಷದಲ್ಲಿ ವಿಮಾನಸ್ಥರಾಗಿ ಸಂಚರಿಸುತ್ತಿದ್ದರು. ಈ ಗಂಧರ್ವಯುಗ್ಮದಲ್ಲಿ ಕೃಶಾನುವು ಅಧಿಕವಾದ ಅಸೂಯೆಯಿಂದ ಲೋಕದಲ್ಲಿ

ದೋಷಗಳನ್ನೇ ಗ್ರಹಿಸುವದರಲ್ಲಾ ಸಕ್ತನಾದನು. ವಿಶ್ವಾವಸುವಾದರೋ ಗುಣಗ್ರಹಣಪರನಾದನು. ಪುರೋಭಾಗದಲ್ಲಿ ಮಹಾತೇಜೋವಿರಾಜಮಾನನಾದ ಶ್ರೀ ಸೂರ್ಯನಾರಾಯಣನನ್ನು ನೋಡಿ ಸಕಲ ಶಾಸ್ತ್ರಸಾರಜ್ಞನಾದ ವಿಶ್ವಾವಸುವು "ಚಕ್ರವಾಕ ಪಕ್ಷಿಗಳ ಸುರತಕ್ಕೆ ಅವಕಾಶಪ್ರದನಾದ, ಛಾಯಾಕಾಂತನಾದ ವೇದಮಯತೇಜೋರೂಪನಾದ ಭಗವಂತನಿಗೆ ನಮಸ್ಕಾರವು" ಎಂದು ಹೇಳಿದನು.

ಕೃಶಾನುವು—ಎಲೈ ಮಿತ್ರನೆ! ನೀರನ್ನು ಹೀರಿ ಸಕಲ ಪ್ರಾಣಿಗಳಿಗೂ ಸಂತಾಪವನ್ನುಂಟುಮಾಡುವ ಸೂರ್ಯನಿಗೆ ಪ್ರಣಾಮವನ್ನೇತಕ್ಕೆ ಮಾಡುತ್ತಿ? ದೀರ್ಘಪ್ರಯಾಣದಿಂದ ಬಳಲಿದ ಪಥಿಕರಿಗೆ ಬಿಸಿಲುನಿಂದ ಖೇದವನ್ನುಂಟುಮಾಡುತ್ತಾನೆ; ಭೂಮಿಯನ್ನು ನಿರ್ಜಲವನ್ನಾಗಿ ಮಾಡುತ್ತಾನೆ; ಮೂಲಿಕೆಗಳ ದ್ರವವನ್ನಪಹರಿಸುತ್ತಾನೆ; ಶ್ರಾಂತರಾದ ಪ್ರಯಾಣಿಕರ ವಿಶ್ರಾಂತಿಗೆ ಕಾರಣವಾದ ಸರೋವರಗಳ ಜಲಸಮೃದ್ಧಿಯನ್ನು ಹೋಗಲಾಡಿಸುತ್ತಾನೆ; ಆದುದರಿಂದ ಸ್ವಭಾವದಿಂದಲೇ ನಿರ್ದಯನಾದ ಆದಿತ್ಯನ ವಿಷಯದಲ್ಲಿ ಗುಣಲೇಶವರ್ಣನೆಗಾದರೂ ಅವಕಾಶವೆಲ್ಲಿಯದು?

ವಿಶ್ವಾವಸು—ಎಲೈ ಸಖನೆ! ಅರವಿಂದಬಾಂಧವನಾದ ಸೂರ್ಯನನ್ನು ಭಗವಂತನೆಂದರಿಯದೆ ದೂಷಿಸುತ್ತಿ. ಜಾಗರೂಕನಾಗಿ ಕೇಳು. ಕಿರಣಗಳಿಂದ ವರ್ಷವನ್ನುಂಟುಮಾಡುವುದರಿಂದ ಜಗದಾನಂದಪ್ರದನಾಗಿಯೂ, ಅಂಧಕಾರವನ್ನು ಹೋಗಲಾಡಿಸುವದರಿಂಹ ಮನುಷ್ಯರ ದೃಷ್ಟಿಪಾಟವಕ್ಕೆ ಕಾರಣನಾಗಿಯೂ, ಜ್ಞಾನಿಗಳಿಗೆ ಕೈವಲ್ಯಮಾರ್ಗಪ್ರದ

ನಾಗಿಯೂ, ಅರವಿಂದವಿಕಾಸಕನಾಗಿಯೂ, ಸರ್ವಜನಮಿತ್ರ ನಾಗಿಯೂ, ಆಕಾಶಾಲಂಕಾರನಾಗಿಯೂ, ಇರುವ ದಿವಾ ಕರನನ್ನು ಯಾರಾದರೆ ಸ್ತೋತ್ರಮಾಡುವುದಿಲ್ಲ? ತಮೋ ವಿಮರ್ದನನಾದ ಸೂರ್ಯನನ್ನು ಯಾವ ದಿನದಲ್ಲಿ ಜನರು ನೋಡುವುದಿಲ್ಲವೋ ಆ ದಿನವನ್ನು ದುರ್ದಿನವೆನ್ನುವರು. "ಆರೋಗ್ಯಂಭಾಸ್ಕರಾದಿಚ್ಛೇತ್" ಎಂಬ ಆಗಮವಚ ನಾನುಸಾರವಾಗಿ ಮನುಷ್ಯರಿಗೆ ಆರೋಗ್ಯಭಾಗ್ಯವನ್ನು ಕೊಡುವವನಾಗಿಯೂ, ವಸಂತಾದಿಕಾಲಭೇದಗಳನ್ನು ನಿಯ ಮಿಸಿ ಭೂಸುರರಿಗೆ ಯಾಗಾದಿ ಸತ್ಕರ್ಮಾನುಷ್ಠಾನೋ ಚಿತಸಮಯಗಳನ್ನು ಕಲ್ಪಿಸುವುದರಿಂದ ಹವಿಃಪೋಷಿತರಾದ ದೇವತೆಗಳನ್ನು ಸಂರಕ್ಷಿಸುವವನಾಗಿಯೂ, ಪಿಶಾಚ ಸಮೂ ಹಕ್ಕೆ ಭಯಂಕರನಾಗಿಯೂ, ಭಕ್ತರನ್ನು ಸಂಸಾರಸಾಗರ ದಿಂದ ಉದ್ಧರಿಸುವವನಾಗಿಯೂ, ಇರುವ ಶ್ರೀ ನಾರಾಯ ಣನು ನಮಗೆ ಶುಭವನ್ನುಂಟುಮಾಡಲಿ.

ಕೃಶಾನು—ನಾರಾಯಣನು ನಿರ್ದಯನಾದರೂ ನೀನು ಆತನನ್ನು ಹೊಗಳುತ್ತಿ. ನೀನು ವಿವೇಕಶೂನ್ಯನೇ ಅಹುದು. ಹೇಗೆಂದರೆ ತಾನೇ ಬ್ರಹ್ಮರೂಪದಿಂದ ಸೃಷ್ಟಿಸಿದ, ವಿಷ್ಣು ರೂಪದಿಂದ ಸಂರಕ್ಷಿಸದ ಜಗತ್ತನ್ನು ರುದ್ರರೂಪದಿಂದ ಸಂಹ ರಿಸುವನು. ಅವನು ನಿಂದ್ಯನೇ ಅಹುದು. ನಿರ್ಮಲವಾದ ನೀರಿ ನಿಂದ ತಾನೇ ಬೆಳಸಿದ ಫಲಭರಿತವಾದ ಮರಗಳನ್ನು ಯಾವ ಹುಚ್ಚನಾದರೂ ಕತ್ತರಿಸುವನೆ? ಅವುಗಳ ನಾಶವನ್ನು ನೋಡಿ ಸಂತೋಷಿಸುವನೆ? ಅತಿ ಕೋಪನನಾದ ರಾಜನೂಕೂಡ ನಿರಪರಾಧಿಯನ್ನು ದಂಡಿಸುವುದಿಲ್ಲ. ಆದರೆ ನಾರಾಯಣನು

ಸಂಸಾರಮಗ್ನಜನರನ್ನು ತಾನೇ ದುಷ್ಕರ್ಮದಲ್ಲಿ ಪ್ರವರ್ತಿಸುವಹಾಗೆ ಪ್ರೇರಿಸಿ ತದ್ದುಷ್ಕರ್ಮಜನ್ಯಕೋಪದಿಂದ ನಿರಪರಾಧಿಗಳಾದ ಆ ಜನರನ್ನು ನಿರಯಗಾಮಿಗಳನ್ನಾಗಿ ಮಾಡುತ್ತಾನೆ. ನಾರಾಯಣನು ಅಕಾರುಣಿಕನಲ್ಲವೆ? ಹೇಳು.

ವಿಶ್ವಾವಸು—ಅಯ್ಯೋ! ನಿನ್ನ ಬುದ್ಧಿಮಾಂದ್ಯವೆಷ್ಟೆಂದು ಹೇಳೋಣ! ಕೃಪಾಸಮುದ್ರನಾದ ಅಧೋಕ್ಷಜನು ಬಹುಕಾಲದಿಂದಲೂ ಸಂಸಾರಸಾಗರದಲ್ಲಿ ಮಗ್ನರಾಗಿ ಭಕ್ತಿಯೊಡನೆ ತನ್ನನ್ನು ನಮಸ್ಕರಿಸುವ ಜನರಿಗೆ ದುರ್ಲಭವಾದ ವೈಕುಂಠವನ್ನೀಯುವನು. ಮೊಸಳೆಯಿಂದ ಹಿಡಿಯಲ್ಪಟ್ಟು ಸಂಕಟಪಡುತ್ತಿದ್ದ ಭಕ್ತನಾದ ಗಜೇಂದ್ರನನ್ನು ಕಾಪಾಡಲು ಲಕ್ಷ್ಮೀಕಾಂತನು ಶೃಂಗಾರಚೇಷ್ಟಾಲಂಪಟಳಾದ ತನ್ನ ಧರ್ಮಪತ್ನಿಯಾದ ಲಕ್ಷ್ಮೀದೇವಿಯನ್ನು ವಿಚಾರಿಸದೆ, ನೀಲಾದೇವಿಯನ್ನೂ ನೋಡದೆ, ಭೂದೇವಿಯನ್ನು ಬಿಟ್ಟು, ಶಯನಭೂತನಾದ ಆದಿಶೇಷನನ್ನು ಹಠದಿಂದ ತ್ಯಜಿಸಿ ಕ್ಷಣಮಾತ್ರವೂ ಕಾಲವಿಲಂಬವನ್ನು ಸಹಿಸದೆ ಮಹಾವೇಗವುಳ್ಳ ಗರುಡನನ್ನು ಆಕರ್ಷಿಸಿ ಲೋಕಾಂತರದಿಂದ ಭಕ್ತನ ಸಮೀಪಕ್ಕೆ ಬಂದನು. ಭೂಸುರರ ದೈವಪಿತ್ರ್ಯಕರ್ಮಾನುಷ್ಠಾನಕ್ಕೆ ಕಂಟಕನಾಗಿಯೂ, ಮತಂಗಜದಂತೆ ಮದೋದ್ಧತನಾಗಿಯೂ, ಅತಿ ದುಷ್ಟನಾಗಿಯೂ ಇದ್ದ ಹಿರಣ್ಯಕಶಿಪುವೆಂಬ ದಾನವೇಂದ್ರನನ್ನು ಸಂಹರಿಸಲು ಅತಿ ಭಯಂಕರಾಕೃತಿಯುಳ್ಳ ಆಕಂಠಕಂಠೀರವನಾಗಿ ಶ್ರೀ ಮಹಾವಿಷ್ಣುವು ಭಕ್ತಾಗ್ರಗಣ್ಯನಾದ ಪ್ರಹ್ಲಾದನ ವ್ಯಸನವನ್ನು ಸೈರಿಸದೆ ಮಹಾ ವೇಗದಿಂದ ಆವಿರ್ಭವಿಸಿದನು.

ದ್ರೌಪದಿಯ ಮಾನಭಂಗದಲ್ಲುದ್ಯುಕ್ತನಾದ ಪಾಪಬುದ್ಧಿ
ಯುಳ್ಳ ದುಶ್ಯಾಸನನು ಆಕೆಯ ವಸ್ತ್ರವನ್ನು ಬಲದಿಂದ ಸೆಳೆ
ಯುತ್ತಿರಲು ಭಕ್ತಪರಾಧೀನನಾದ ಶ್ರೀಕೃಷ್ಣನು ನೇಯು
ವಕೊಳಲು, ನೂಲುಕಂಡಿಕೆ, ನೂಲು ಎಂಬೀ ಉಪಕರಣಗ
ಳನ್ನು ಅಪೇಕ್ಷಿಸದೆ ಅನುಕ್ಷಣವೂ ನೂತನವಸ್ತ್ರಗಳನ್ನು
ನಿರ್ಮಿಸಿ ದ್ರುಪದ ತನಯೆಯ ಮಾನರಕ್ಷಣೆಯಂ ಮಾಡಿ
ದನು. ಪರಮಾತ್ಮನ ರಾಮಾವತಾರದಲ್ಲಿ ಜಯಂತನು ಅಧಿ
ಕಸಂತೋಷವನ್ನು ಹೊಂದಿದನು. ಜಟಾಯುವು ಪರಮ
ಪದದಲ್ಲಿ ಸೇರಿದನು. ನಿಷಾದಾಧಿಪತಿಯಾದ ಗುಹನು ನಿರ್ವಿ
ಷಾದನಾಗಿ ಕುಶಲವಂ ಪಡೆದನು. ಸುಗ್ರೀವ ವಿಭೀಷಣರು
ರಾಜ್ಯಾಭಿಷಿಕ್ತರಾದರು. ಆದುದರಿಂದ ಭಗವಂತನ ಕರು
ಣೆಯು ಅಪ್ರಮೇಯವಾಗಿದೆ. ಪಾಷಾಣಾದಿ ಸ್ಥಾವರಾವ
ಸ್ಥೆಯನ್ನು ಹೊಂದುವ ಜೀವನಿಗೆ ಸ್ವರ್ಗಾಪವರ್ಗ ಸಂಪಾದ
ಕವಾದ ದೇಹವನ್ನು ಕೊಟ್ಟ ವಾಸುದೇವನ ವಿಷಯದಲ್ಲಿ
ಕೃತಜ್ಞತೆಯನ್ನು ತೋರಿಸದೆ ತಮ್ಮ ದುಷ್ಕರ್ಮದಿಂದಲೇ
ದುಃಖವು ಪ್ರಾಪ್ತವಾದರೆ ಮೂರ್ಖರು ನಿರಪರಾಧಿಯಾದ
ಜಗದೀಶ್ವರನಲ್ಲಿ ನಿರ್ದಯತ್ವವನ್ನಾರೋಪಿಸುವರು. ಆಶ್ಚ
ರ್ಯ! ಸ್ವಕೃತಾಪರಾಧಕ್ಕೆ ಜಗದೀಶ್ವರನೇನು ಮಾಡಲಾ
ಪನು? ದುಃಖೋಪಶಮನಕ್ಕೋಸುಗ ಪರಮೇಶ್ವರನು
ಕರ್ಮೇಂದ್ರಿಯಗಳನ್ನೂ ಜ್ಞಾನೇಂದ್ರಿಯಗಳನ್ನೂ ಶರೀರ
ವನ್ನೂ ಕೊಟ್ಟಿರುವಲ್ಲಿ ಜಂತುವು ಇವುಗಳನ್ನು ದುರ್ಮಾ
ರ್ಗದಲ್ಲಿ ಉಪಯೋಗಿಸಿ ಅನರ್ಥವನ್ನೇ ಸಂಪಾದಿಸಿದರೆ ಜಗ
ನ್ನಿಯಾಮಕನಾದ ಭಗವಂತನಪರಾಧಿಯೆ? ಶತ್ರುಜಯಕ್ಕೋ

ಮಗ ತಂದೆಯಿಂದ ಕೊಡಲ್ಪಟ್ಟ ಶಸ್ತ್ರದಿಂದ ಮಗನು ತನ್ನ ಶರೀರವನ್ನೇ ಸಂಹರಿಸಿದರೆ ಇದರಲ್ಲಿ ದೋಷಿಯು ಯಾರು? ಹೇಳು ಸಖನೆ. ಪರಮಾತ್ಮನ ಸ್ವರೂಪವನ್ನು ತಿಳಿಯಲೋಸುಗ ಶಾಸ್ತ್ರವನ್ನೂ, ಸ್ವಾಮಿಯನ್ನು ಪೂಜಿಸುವುದಕ್ಕೋಸ್ಕರ ಕರಚರಣಾದ್ಯವಯವಗಳನ್ನೂ, ಪರಮಾತ್ಮನನ್ನು ಧ್ಯಾನಿಸಲು ಮನಸ್ಸನ್ನೂ, ಬುದ್ಧಿನೈರ್ಮಲ್ಯವನ್ನು ಸಂಪಾದಿಸಲು ದಿವ್ಯಕ್ಷೇತ್ರತೀರ್ಥಕದಂಬವನ್ನೂ, ಪರಮಾರ್ಥವನ್ನು ತಿಳಿಯುವುದಕ್ಕೋಸ್ಕರ ಪವಿತ್ರರಾದ ಆಚಾರ್ಯರನ್ನೂ ಕೊಟ್ಟು ಸ್ವಾಮಿಯು ನಮ್ಮನ್ನನುಗ್ರಹಿಸುತ್ತಿರುವನು. ಆದಾಗ್ಯೂ ನಾವು ಮೋಹಮಯವಾದ ಸಂಸಾರಸಮುದ್ರವಲ್ಲಿ ಮುಳುಗಿ ಮುಳುಗಿ ಭ್ರಮಿಸಿದರೆ ಸರ್ವೇಶ್ವರನೇನುಮಾಡತಕ್ಕದ್ದು? ಈಪ್ರಕಾರವಾಗಿ ವಾಸುದೇವನ ಗುಣಗಳನ್ನು ವರ್ಣಿಸುತ್ತಾ ಕೃಶಾನುವಿನಿಂದೊಡಗೂಡಿ ವಿಶ್ವಾವಸುವು ಉತ್ತರಕ್ಕೆ ಹೊರಟು "ಓ, ಮಿತ್ರನೆ! ಸಕಲ ಧರ್ಮಾಚರಣೆಗೆ ಸ್ಥಾನವಾದ ಭೂಲೋಕವನ್ನು ನೋಡು" ಎಂದು ಹೇಳಿದನು. ಸದಾಚಾರಸಂಪನ್ನರಾದ ಪುರುಷರಿಂದ ಆಚರಿಸಲ್ಪಟ್ಟ ಕ್ರತುಗಳಲ್ಲಿ ಸಮರ್ಪಿಸಲ್ಪಟ್ಟ ಹವಿರ್ಭಾಗವು ದೇವತೆಗಳಿಂದ ಸ್ವೀಕರಿಸಲ್ಪಡುತ್ತದೆ. ವೇದಗಳನ್ನು ಓದಿ ಅವುಗಳಲ್ಲಿ ನಿರೂಪಿಸಲ್ಪಟ್ಟ ಕರ್ಮಗಳನ್ನು ಮಾಡುತ್ತಿರುವ ದ್ವಿಜೋತ್ತಮರಿಂದ ಅಲಂಕೃತವಾದ, ಬದರೀಕೇದಾರಾದಿ ದಿವ್ಯಸ್ಥಲಗಳಿಂದ ಸುಶೋಭಿತವಾದ, ಗಂಗಾದಿಪುಣ್ಯತೀರ್ಥಗಳಿಂದ ಪರಿಶುದ್ಧವಾದ ಈ ಪೃಥಿವೀದೇವಿಗೆ ನಮಸ್ಕಾರವಾಗಲಿ" ಎಂದು ವಿಶ್ವಾವಸುವು ಹೇಳಿದನು.

ಕೃಶಾನು—ಎಲೈ ಸಖನೆ! ಸ್ವರ್ಗ ನಿವಾಸಿಯಾದ ನೀನು ಮರ್ತ್ಯಲೋಕವನ್ನು ನಮಸ್ಕರಿಸುವುದುಚಿತವಲ್ಲ. ಏತಕ್ಕೆಂದರೆ—ಭೂಲೋಕ ನಿವಾಸಿಗಳು ಜನನಮರಣ ಸಂತಾಪದಿಂದಲೂ, ಜ್ವರಾದಿ ರೋಗಗಳ ಸಂಬಂಧದಿಂದಲೂ ಸಕಲ್ಮಷರಾಗಿದಾರೆ. ದುಃಖಪೀಡಿತರಾಗಿಯೂ, ಮದೋನ್ಮತ್ತರಾಗಿಯೂ, ಕ್ಷುದ್ರಬುದ್ಧಿಯುಳ್ಳವರಾಗಿಯೂ ದೋಷಾನ್ವೇಷಣಪರರಾಗಿಯೂ, ಇರುವ ರಾಜರಿಂದ ಹಾನಿಗೆ ಪಾತ್ರವಾದ ಮರ್ತ್ಯಲೋಕವನ್ನು ಯಾವ ಪ್ರಾಜ್ಞನಾದರೂ ಬಯಿಸುವನೆ? ಬಾಲ್ಯದಲ್ಲಿ ಹಲವರು ಯೌವನದಲ್ಲಿ ಕೆಲವರು ವಾರ್ಧಕದಲ್ಲಿ ಕೆಲವರು ಮೃತರಾಗಿ ನರಕದಲ್ಲಿ ಯಾತನೆಯನ್ನು ಅನುಭವಿಸುವರು. ಇಂತಹವರು ಬದುಕಿರುವಾಗಲೂ ಸುಖವನ್ನೇನನುಭವಿಸುವರು? ಸತ್ಪುರುಷರ ಮರಣವಾದರೋ ಎಲ್ಲರಿಗೂ ವ್ಯಸನವನ್ನುಂಟುಮಾಡುವುದು.

ವಿಶ್ವಾವಸು—ಸಖನೆ! ನೀನು ಹೇಳುವುದು ನಿಶ್ಚಯವು. ಆದಾಗ್ಯೂ ಮಾನುಷಜನ್ಮವನ್ನು ನಿಂದಿಸಬಾರದು. ರಾವಣನನ್ನು ಸಂಹರಿಸಿ ಲೋಕಕ್ಕೆ ಕ್ಷೇಮವನ್ನುಂಟುಮಾಡಿದ ಶ್ರೀರಾಮನು ಮನುಷ್ಯನಲ್ಲವೆ? ರಾಕ್ಷಸರೊಡನೆ ದೇವತೆಗಳು ಯುದ್ಧಮಾಡಿದಕಾಲದಲ್ಲಿ ದೇವೇಂದ್ರನಿಗೆ ಸಹಾಯ ಮಾಡಿದ ದಶರಥನು ಮನುಷ್ಯನಲ್ಲವೆ? ಗೋವರ್ಧನಪರ್ವತವನ್ನು ಉದ್ಧರಿಸಿ ಇಂದ್ರನ ಗರ್ವವನ್ನು ಮುರಿದ ಶ್ರೀಕೃಷ್ಣನು ಮನುಷ್ಯನೆಂದರಿಯೆಯ? ದೇವತೆಗಳಲ್ಲಾಗಲಿ ದಾನವರಲ್ಲಾಗಲಿ ಮನುಷ್ಯರನ್ನು ಪ್ರಭಾವದಲ್ಲಿ ಮೀರಿಸಿದವರು ಯಾರು? ಧಾರ್ಮಿಕನಾದ ಮಾಂಧಾತೃವೂ, ಪರಾಕ್ರಮಶಾಲಿ

ಯಾದ ಭಗೀರಥನೂ,ಲೋಕವಿಖ್ಯಾತನಾದಸಗರನೂ, ಮಾನ್ಯ ನಾದ ಕಕುತ್ಸ್ಥನೂ, ಗುಣಾಕರನಾದ ಪೂರುವು, ಮಾನ ಧನನಾದ ಪುರೂರವನೂ, ಶರಣಾಗತರಕ್ಷಕನಾದ ಶಿಬಿಚಕ್ರ ವರ್ತಿಯೂ, ದೃಢವ್ರತನಾದ ರುಕ್ಮಾಂಗದನೂ, ರಾಜರ್ಷಿ ಯಾದ ಜನಕನೂ, ತಪೋಧನನಾದ ನಹುಷನೂ, ಧೀರನಾದ ಹೈಹಯರಾಜನೂ, ವೀರನಾದ ಯಯಾತಿಯೂ, ಶ್ರಮಸಹಿ ಷ್ಣುವಾದ ನಳನು, ಸತ್ಯಸಂಧನಾದ ಧರ್ಮರಾಯನು, ಮರ್ತ್ಯ ಲೋಕದಲ್ಲವತರಿಸಿ ನಿರ್ಮಲವಾದ ಯಶಸ್ಸನ್ನು ಪಡೆದು ಪುಣ್ಯಪುರುಷರೆಂದು ಯಾವಾಗಲೂ ಸ್ಮರಿಸಲ್ಪಡುತ್ತಿಲ್ಲವೆ ?

ಕೃಶಾನು—ಎಲೈ ಮಿತ್ರನೆ ! ಮಾಂಧಾತ್ರಾದಿ ಪುಣ್ಯ ಪುರುಷರು ಯುಗಾಂತರಗಳಲ್ಲಿ ಭೂಲೋಕವನ್ನಲಂಕರಿಸಿ ದರು. ಈ ಕಲಿಯುಗದಲ್ಲಿ ಎಲ್ಲರೂ ಅಧರ್ಮಾಚರಣಪರ ರಾಗಿಯೂ, ಗುಣಲವರಹಿತರಾಗಿಯೂ, ಐಹಿಕಸುಖೈಕ ನಿರತರಾಗಿಯೂ, ಜಡಮತಿಗಳಾಗಿಯೂ, ಭೂಭಾರವಾ ಗಿರುವರು. ಕಾಮಕ್ರೋಧಲೋಭಮದಮೋಹಮತ್ಸರ ಪ್ರಧಾನರಾದ, ಪಾಪಾತಿಶಯದಿಂದ ಮಧ್ಯಮಲೋಕದಲ್ಲಿ ಹುಟ್ಟಿರುವ, ದುರುಳರಾದ ರಾಜರನ್ನು ನೋಡಿದರೆ ನಾವು ಪಾಪಕ್ಕೆ ಗುರಿಯಾಗುವೆವು.

ವಿಶ್ವಾವಸು—ಆದಾಗ್ಯೂ ಕಲಿಕಾಲದ ಮನುಷ್ಯರು ನಿಂದಾರ್ಹರಲ್ಲ. ಏತಕ್ಕೆಂದರೆ ಸರ್ವಕಾಲದಲ್ಲಿಯೂ ಕೆಲ ವರು ಸಾಧುಗಳು ಇದ್ದೇ ಇರುವರು. ದುಷ್ಕರ್ಮನಿರತ ರಾದ, ಗರ್ವಿಷ್ಠರಾದ ಪ್ರಭುಗಳನ್ನು ತಿರಸ್ಕರಿಸುವವ ರಾಗಿಯೂ, ನಾರಾಯಣಧ್ಯಾನಶುದ್ಧಾಂತರಂಗರಾಗಿಯೂ,

ಶಾಸ್ತ್ರೈಕ ಶರಣರಾಗಿಯೂ, ಕರ್ಮಜ್ಞಾನಮಾರ್ಗಗಳ ಅನುಷ್ಠಾನಕ್ಕೋಸುಗವೇ ಭೂಲೋಕದಲ್ಲಿ ಅವತರಿಸಿದವರಾಗಿಯೂ ವಿಮಲಯಶಸ್ಕರಾಗಿಯೂ, ಇರುವ ಸತ್ಪುರುಷರು ಕಲಿಯುಗದಲ್ಲಿಯೂ ದರ್ಶನವನ್ನೀಯುವರು.

"ನನ್ನ ಮಾತುಗಳಲ್ಲಿ ನಿನಗೆ ನಚ್ಚಿಕೆಯಿಲ್ಲದಿದ್ದರೆ ಅಲ್ಲಲ್ಲಿ ದಿವ್ಯಕ್ಷೇತ್ರಗಳನ್ನೂ, ಪುಣ್ಯತೀರ್ಥಗಳನ್ನೂ, ಪುಣ್ಯಪುರುಷರನ್ನೂ ತೋರಿಸುವೆನು ಬಾ" ಎಂದು ಕೃಶಾನುವಿಗೆ ನುಡಿದು ವಿಮಾನವನ್ನು ಮುಂದಕ್ಕೆ ತಿರುಗಿಸಿ ಬೆರಳಿನಿಂದ ತೋರಿಸಿ ವಿಶ್ವಾವಸುವು ಮರಳಿ ಹೇಳಲುಪಕ್ರಮಿಸಿದನು. ಇದೇ ಬದರಿಕಾಶ್ರಮವು. ಇಲ್ಲಿ ಶ್ರೀನಾರಾಯಣನು ತನ್ನನ್ನು ಧ್ಯಾನಿಸುವ ಜನರ ಅಜ್ಞಾನಾಂಧಕಾರವನ್ನು ಹೋಗಲಾಡಿಸುತ್ತಾ ತಪಸ್ಸು ಮಾಡುತ್ತಿರುವನು. ಇಲ್ಲಿ ತತ್ವಜ್ಞರಾದ, ವಿಷಯಸ್ಪೃಹಾರಹಿತರಾದ ಸಜ್ಜನರು ಶೇಷಶಯನನಾದ ರಮಾಪತಿಯನ್ನು ಅನವರತವೂ ಪೂಜಿಸುವರು.

ಕೃಶಾನು—ಮಿತ್ರನೇ! ಈ ಬದರಿಕಾಶ್ರಮವನ್ನು ನೀನು ವರ್ಣಿಸುವ ರೀತಿಯು ನನಗೆ ಸಮ್ಮತವಲ್ಲ. ಕಾರಣವೇನೆಂದರೆ—ಇಲ್ಲಿ ಕಲ್ಲಿಗಿಂತಲೂ ಕಠಿನವಾದ ಹಿಮದ ದೆಸೆಯಿಂದಲೂ, ಛಳಿಗಾಳಿಯಿಂದಲೂ, ಅತಿ ಶೀತಲವಾದ ನೀರಿನಿಂದಲೂ, ಭೀತರಾದ ಜನರಿಗೆ ಸ್ನಾನಕ್ಕೆ ಅವಕಾಶವಿಲ್ಲದಿರುವಲ್ಲಿ ಸತ್ಕರ್ಮಾಚರಣೆಯು ದುಷ್ಕರವೇ ಅಹುದು.

ವಿಶ್ವಾವಸು—ನಿನ್ನ ವಚನವನ್ನಂಗೀಕರಿಸುವೆನು. ಪ್ರಭಾವಾತಿಶಯದಿಂದೊಡಗೂಡಿದ ಶಮದಮಾದಿ ಗುಣಸಂಪನ್ನರಾದ ಪಂಡಿತರು ಸ್ನಾನಕಾಲದಲ್ಲಿ ಈಸ್ಥಲಕ್ಕೆ ಬಂದು ಸರೋ

ವರಗಳಲ್ಲಿ ನಿಶ್ಶಂಕವಾಗಿ ಸ್ನಾನಮಾಡಿದರೂ ಗರುಡಧ್ವಜನ ಪ್ರಸಾದದಿಂದ ರೋಗರಹಿತರಾಗಿರುವರು. ಭಗವತ್ಪ್ರಸಾದವಿದ್ದಲ್ಲಿ ಯಾವುದು ದುರ್ಲಭವು? ಬಳಿಕ ವಿಶ್ವಾವಸುವು ಮುಂದಕ್ಕೆ ಹೋರಟು ಬದ್ಧಾಂಜಲಿಯಾಗಿ ನುಡಿದನದೆಂತೆಂದರೆ:—

"ಅಹಲ್ಯಾಶಾಪವಿಮೋಚಕವಾದ, ಸಂಸಾರ ಸಾಗರತಾರಕವಾದ, ರಾಮಚಂದ್ರ ಪಾದಯುಗಳರಜಸ್ಸಿನಿಂದ ಪವಿತ್ರವಾದ, ಅನಲ್ಪವಾದ ಐಶ್ವರ್ಯದಿಂದೊಪ್ಪುತ್ತಿರುವ ಅಯೋಧ್ಯಾನಗರಿಗೂ, ಸೂರ್ಯವಂಶರಾಜರ ಕೀರ್ತಿಯನ್ನು ವ್ಯಂಜಿಸುತ್ತಿರುವ ಯೂಪಸ್ತಂಭಗಳಿಂದ ಅಲಂಕರಿಸಲ್ಪಟ್ಟ ಸಕಲ ಕಲಿಕಲ್ಮಷಾಪಹಾರಿಣಿಯಾದ ಸರಯೂ ನದಿಗೂ ನಮಸ್ಕಾರವಾಗಲಿ"

ನೀಲಮೇಘಶ್ಯಾಮಸುಂದರನಾಗಿಯೂ, ಶುಭಲಕ್ಷಣೋಪಲಕ್ಷಿತನಾಗಿಯೂ, ಜಾನಕೀಮನೋಹರನಾಗಿಯೂ ದೇವಗಣಸಮ್ಮಾನಿತನಾಗಿಯೂ, ಸಾಕೇತಪುರೀಮಂಡನನಾಗಿಯೂ ದಿಗಂತವಿಶ್ರಾಂತ ಯಶೋಭೂಷಿತನಾಗಿಯೂ, ಕರುಣಾಸಾಗರನಾಗಿಯೂ ಪ್ರಕಾಶಿಸುತ್ತಿರುವ ಶ್ರೀರಾಮಚಂದ್ರನು ಅನವರತವೂ ನಮಗೆ ಶುಭವನ್ನೀಯಲಿ.

ಕೃಶಾನುವು—ಶ್ಲಾಘ್ಯವಾದ ಕೆಲಸಗಳನ್ನು ಮಾಡದೆ ಇರುವ ರಾಮನನ್ನು ಸ್ತುತಿಸಲೇತಕ್ಕೆ ಬಯಸುವಿ? ಮಲತಾಯಿಯಾದ ಕೈಕೇಯಿಗೋಸ್ಕರ ಜಾನಕೀರಮಣನು ಹಿರಿಯವನಾದರೂ ಗಜತುರಗರಥಾದಿಸಂಪತ್ಸಮೃದ್ಧವಾದ ರಾಜ್ಯವನ್ನು ಬಿಟ್ಟು ಘೋರವಾದ ಅರಣ್ಯವನ್ನು ಪ್ರವೇಶಿಸಿದನು; ಮಧುರವಾದ ಗೋಕ್ಷೀರವನ್ನು ಬಿಟ್ಟು ಯಾವಮೂಢ

ನಾದರೂ ಅಂಬಲಿಯನ್ನು ಕುಡಿಯುವನೆ? ದಶಗ್ರೀವನ ಸೊಕ್ಕನ್ನು ಮುರಿದ ಚತುರನಾದ ವಾಲಿಯನ್ನಪೇಕ್ಷಿಸಿ ರಾಕ್ಷಸರನ್ನು ನಿಗ್ರಹಿಸಲು ಸುಗ್ರೀವಸಖ್ಯವಂ ಮಾಡಿದನು; ದೊಡ್ಡ ಕಲ್ಲನ್ನು ಸೀಳಿಸಲು ಹವವಾದ ಉಳಿಯನ್ನು ಬಿಟ್ಟು ಮೃದುವಾದ ತಾವರೆ ಎಲೆಯನ್ನು ಯಾವ ಬುದ್ಧಿಹೀನನಾದರೂ ಉಪಯೋಗಿಸಲಿಚ್ಛಿಸುವನೆ? ಇಷ್ಟೇ ಅಲ್ಲ. ಸಮುದ್ರಕ್ಕೆ ಸೇತುವನ್ನು ಕಟ್ಟಿ, ದುರ್ಮಾರ್ಗರಾದ ರಾಕ್ಷಸರನ್ನು ಖಂಡಿಸಿ ಅಗ್ನಿಪ್ರವೇಶದಿಂದ ಪರಿಶುದ್ಧಳಾದ ಸೀತಾದೇವಿಯನ್ನಂಗೀಕರಿಸಿ, ಗರ್ಭಿಣಿಯಾದ ಜಗದಂಬಿಕೆಯನ್ನು ಮರಳಿ ವನಕ್ಕೆ ಕಳುಹಿದನು; ಹೀಗೆ ಕೆಟ್ಟ ಕೆಲಸಗಳನ್ನು ಮಾಡಿದ ರಾಮನನ್ನು ಹೊಗಳಬಹುದೆ?

ವಿಶ್ವಾವಸು—ತಂದೆಯ ಮಾತನ್ನು ಮೀರಬಾರದೆಂಬುವ ಕೋರಿಕೆಯಿಂದ ರಾಜ್ಯಕೋಶಾದಿಗಳನ್ನು ತೃಣೀಕರಿಸಿ ರಾಮನು ಕಾಡಿಗೆತೆರಳಿದನು. ಗರ್ವೋದ್ಧತನಾದ ಬಲಿಷ್ಠನಾದ ವಾಲಿಯನ್ನು ತಿರಸ್ಕರಿಸಿ ಸುಗ್ರೀವನಿಗೆ ಸಾಹಾಯ್ಯವನ್ನು ಮಾಡಿದುದರಿಂದ ಶ್ರುತಿ ಸ್ಮೃತಿ ಪುರಾಣೇತಿಹಾಸಗಳಲ್ಲಿ ವರ್ಣಿತವಾದ ಪರಮಾತ್ಮನ ದೀನಬಂಧುತ್ವವು ವ್ಯಕ್ತವಾಗುವುದು.

ರಾಮಾಕೃತಿಯುಳ್ಳ ಶ್ರೀಪತಿಯು ಯಾವಾಗಲೂ ಲಕ್ಷ್ಮಿಯನ್ನು ವಕ್ಷಸ್ಥಲದಲ್ಲಿ ಧರಿಸಿದಾನೆ. ಕಪಟನಾಟಕಸೂತ್ರಧಾರಿಯಾದ ಪರಮಾತ್ಮನು ಲೋಕಾಪವಾದವನ್ನು ಸೈರಿಸದೆ ಶುಭಾಂಗಿಯಾದ ಸೀತೆಯನ್ನು ಕಾಡಿಗೆ ಕಳುಹಿ ಲೋಕದಲ್ಲಿ ಅನನ್ಯವಿದಿತವಾದ ಮಾನುಷವೃತ್ತಿಯನ್ನು ಅಭಿನಯಿಸಿದನು.

ಇಂತಹ ಪವಿತ್ರಚರಿತ್ರನಾದ ಶ್ರೀರಾಮಭದ್ರನ ಅನಂತಕಲ್ಯಾಣಗುಣಗಳಲ್ಲಿ ಏಕದೇಶವನ್ನಾದರೂ ವರ್ಣಿಸಲು ಸಹಸ್ರವಕ್ತ್ರನೂ ಅಶಕ್ತನೇ ; ಆದಕಾರಣ ರಾಮನಲ್ಲಿ ದೋಷಾರೋಪಣೆಯಂ ಮಾಡುವುದು ನಿನಗೆ ಯುಕ್ತವಲ್ಲ. ಹೀಗೆ ಹೇಳುತ್ತಾ ದಕ್ಷಿಣಕ್ಕೆ ವಿಮಾನವನ್ನು ತಿರುಗಿಸಿ ಕೃಶಾನುವನ್ನು ಕುರಿತು ಪೇಳಿದನದೆಂತೆಂದರೆ:—ಸಂಸಾರದುಃಖವನ್ನು ಪರಿಹರಿಸುವ ಸಕಲ ವಿಪತ್ಪರಿಹಾರಿಣಿಯಾದ ದುಃಖಿತರಿಗೆ ಹರ್ಷವನ್ನೀಯುವ ಪಾಪಹಾರಿಣಿಯಾದ ಗಂಗಾನದಿಯನ್ನು ನೋಡು.

ಕೃಶಾನು—ಹಿರಣ್ಯಕಶಿಪು ಸಂಹಾರಕನಾದ, ಮಹಾವಿಷ್ಣುವಿನ ಪಾದದಲ್ಲಿ ಹುಟ್ಟಿದ, ಬ್ರಹ್ಮಕಪಾಲವನ್ನು ಧರಿಸಿರುವ ಈಶ್ವರನ ತಲೆಯಲ್ಲಿ ಬೃಹಸ್ಪತಿಪತ್ನೀವಿಟನಾದ ಚಂದ್ರನೊಡನೆ ಇರುವ ಗಂಗಾನದಿಯು ಶ್ಲಾಘನೀಯವೆ ?

ವಿಶ್ವಾವಸು—ಎಲೈ ! ಜಡಮತಿಯೆ ! ಶ್ರೀಮನ್ನಾರಾಯಣನ ಪಾದಾರವಿಂದದಲ್ಲಿ ಉದ್ಭವಿಸಿದ ಮಕರಂದಧಾರೆಯಾದ ಗಂಗೆಯನ್ನು ಕೂಡ ದೂಷಿಸುತ್ತೀ. ಸಗರಚಕ್ರವರ್ತಿಯ ವಂಶಕ್ಕೆ ಅಮರತ್ವವನ್ನುಂಟುಮಾಡಿದ ಗಂಗಾನದಿಗಿಂತಲೂ ಪವಿತ್ರತರವಾದ ನದಿಯುಂಟೆ ? ತ್ರಿಲೋಕಪಾವನಿಯಾದ ಗಂಗಾನದಿಯಲ್ಲಿ ಕರ್ಮಶ್ರದ್ಧೆಯುಳ್ಳವರು ತರ್ಪಣೋದಕವನ್ನು ಪಿತೃದೇವತೆಗಳಿಗೆ ಕೊಡುವುದರಿಂದ ಪಿತೃಗಳು ನಿಷ್ಕಲ್ಮಷರಾಗುವರು. ಎಷ್ಟು ಆಶ್ಚರ್ಯ ! ಮಲ್ಲಿಗೆ ಗೊಂಚಲಿನಂತೆ ಧವಳವಾದ ಗಂಗಾಪ್ರವಾಹವು ನೀಲವಾದ ಯಮುನಾನದಿಯಿಂದಲೂ, ಪೀತವಾದ ಸರಸ್ವತೀ

ನದಿಯಿಂದಲೂ ಸಂಗಮಿಸುವುದರಿಂದ ಸತ್ವರಜಸ್ತಮೋಗು ಣಾತ್ಮಕವಾದ ಪ್ರಕೃತಿಗೆ ಸಮಾನವಾದಾಗ್ಯೂ ಸಕಲ ಪಾಪ ಜಾಲವನ್ನೂ ಪರಿಹರಿಸಿ ದುಸ್ತರವಾದ ಸಂಸಾರಸಾಗರ ದಿಂದ ಜಂತುಗಳನ್ನುದ್ಧರಿಸುವುದು. ಭಾಗೀರಥಿಯು ಗಾಂ ಭೀರ್ಯದಲ್ಲಿ ಗರುಡಧ್ವಜನ ಹೃದಯುವನ್ನೂ, ಮಾಧುರ್ಯದಲ್ಲಿ ಮಧುಸೂದನನ ವಾಣಿಯುನ್ನೂ, ಧಾವಳ್ಯದಲ್ಲಿ ದಾಮೋದರನ ಕೀರ್ತಿಯುನ್ನೂ,ಶೈತ್ಯದಲ್ಲಿಶೌರಿಯ ಅವ್ಯಾಜಕರುಣೆಯನ್ನೂ, ನೈರ್ಮಲ್ಯದಲ್ಲಿ ನರಸಿಂಹನ ಬುದ್ಧಿಯುನ್ನೂ, ಸೌಮ್ಯತ್ವದಲ್ಲಿ ಸಂಕರ್ಷಣನ ವದನವನ್ನೂ ಹೋಲುತ್ತದೆ ಎಂದು ನುಡಿದು ಆನಂದಭರಿತನಾಗಿ ಮುಂದೆ ನೋಡಿ ನುಡಿದನದೆಂತೆಂದರೆ:—

ಗಗನವನ್ನು ಮುಟ್ಟುತ್ತಿರುವ ಅರಮನೆಗಳಿಂದಲಂಕೃ ತವಾಗಿಯೂ, ಕುದುರೆಗಳ ಹುಂಕಾರಧ್ವನಿಯಿಂದ ಮುಖರಿ ತವಾಗಿಯೂ, ವಿಶ್ವೇಶ್ವರನ ಶಿರೋಭೂಷಣನಾದ ಚಂದ್ರನ ಅಮೃತಕಿರಣಗಳಿಂದ ಅಂಧಕಾರರಹಿತವಾಗಿ ಪ್ರಕಾಶಿಸುತ್ತಿ ರುವ ಕಾಶೀನಗರವನ್ನು ನೋಡು.

ಕೃಶಾನ:—ಎಲೈ ಸಖನೆ! ಕಾಶಿಯೂ ಶ್ಲಾಘನೀ ಯುವೆ? ಕಾಶೀನಗರದ ನಿವಾಸಿಗಳು, ಮುಕ್ತಾಹಾರವಿಭೂ ಷಿತರಾಗಿ, ಷಡ್ರಸೋಪೇತವಾದ ಅನ್ನವನ್ನು ತಿನ್ನುವವರಾಗಿ, ಗಜತುರಗವಾಹನ ಸಂಪನ್ನರಾಗಿ, ಸೌಂದರ್ಯದಿಂದ ಗರ್ವಿತ ರಾದ ಸ್ತ್ರೀಯರೊಡನೆ ಅಂತಃಪುರಗಳಲ್ಲಿ ವಿಹರಿಸುವವರಾ ದರೂ, ಭಯಂಕರವಾದ ಎಲುಬುಗಳನ್ನು ಧರಿಸುವವರಾ ಗಿಯೂ, ವೃಷಭವಾಹನರಾಗಿಯೂ, ತಾಮಸಾಹಾರಿಗಳಾ ಗಿಯೂ, ಶ್ಮಶಾನಗಳಲ್ಲಿ ಪಿಶಾಚಗಳೊಡನೆ ಕುಣಿಯುತ್ತಿರು

ವರು. ಎಲೈ ಕಾಶಿಯೇ! ಬೇರೊಂದು ಪುಣ್ಯಕ್ಷೇತ್ರದಲ್ಲಿ ಒಂದು ವಸ್ತುವನ್ನು ಸತ್ಪಾತ್ರದಲ್ಲಿ ದಾನಮಾಡಿದರೆ ಆ ಪುಣ್ಯ ಕ್ಷೇತ್ರದ ಪ್ರಭಾವದಿಂದ ಜನ್ಮಾಂತರದಲ್ಲಿ ಅತ್ಯಧಿಕವಾದ ಫಲವು ಪ್ರಾಪ್ತವಾಗುವುದು. ನಿನ್ನಲ್ಲಾದರೋ ವಾಸವನ್ನೂ ಮಾಡಿ ಬಾರಿಬಾರಿಗೂ ಅನೇಕ ವಸ್ತ್ರದಾನವಂ ಮಾಡಿದಾಗ್ಯೂ ಜನ್ಮಾಂತರದಲ್ಲಿ ಜನಗಳು ದಿಗಂಬರರಾಗುವರು. ಹೇ ವಾರಾಣಸಿಯೇ! ನಿನ್ನಲ್ಲಿ ವಾಸಿಸುವ ಜನಗಳು ಜನ್ಮಾಂತ ರದಲ್ಲಿಯೂ ಕೂಡ ಶೂಲರೋಗದಿಂದ ಪೀಡಿತರಾಗಿಯೂ, ಶೈತ್ಯರೋಗಗ್ರಸ್ತರಾಗಿಯೂ, ಸಂಕಟಪಡುತ್ತಿರುವರು. ಹೀಗೆ ಯಾವಾಗಲೂ ಅನಾರೋಗ್ಯಪ್ರದೇಶವಾದ ನಿನ್ನನ್ನು ಆರೋಗ್ಯಭೂಮಿಯೆಂದೂ ಪುಣ್ಯಕ್ಷೇತ್ರವೆಂದೂ ಹೊಗಳು ವರು. ಇದೇನಾಶ್ಚರ್ಯ?

ವಿಶ್ವಾವಸು—ಎಲೈ ಮಂದಮತಿಯೇ! ಶಿವಸಾಯು ಜ್ಯಾದಿ ಸಕಲ ಸೌಖ್ಯವನ್ನೂ ಕೊಡುವಂತಹ ವಾರಾಣಸಿ ಯನ್ನೇತಕ್ಕೆ ದೂಷಿಸುತ್ತಿ? ಈ ಪುಣ್ಯತಮವಾದ ಸ್ಥಲದಲ್ಲಿ ವಾಸಿಸುವ ಜನರು ಸ್ವಚ್ಛಂದನವನಿತಾದಿ ಭೋಗೈಕನಿರತ ರಾದರೂ ಯೋಗಿವರ್ಯರಿಗೆ ಸುಲಭವಾದ ಶಿವಸಾರೂಪ್ಯವ ನ್ನೈದುವರು. ಈ ವಾರಾಣಸಿಯಲ್ಲಿ ವಿಶ್ವೇಶ್ವರನು ಸಕಲ ಜಂತುಗಳಿಗೂ ಪ್ರಾಣೋತ್ಕ್ರಮಣಕಾಲದಲ್ಲಿ ರಾಮಮಂ ತ್ರವನ್ನುಪದೇಶಿಸುವನು. ಹೀಗೆ ಗಂಗಾತೀರವನ್ನೆಲ್ಲಾ ನೋಡಿ ಮುಂದಕ್ಕೆ ಹೊರಟು ಕೈಮುಗಿದುಕೊಂಡು ವಿಶ್ವಾ ವಸುವು ಮರಳಿ ಪೇಳಲಾರಂಭಿಸಿದನದೆಂತೆಂದರೆ:—

ಪ್ರತಿದಿನದಲ್ಲಿಯೂ ಪ್ರಾತಃಕಾಲದಲ್ಲಿ ಲೋಕಪಾವನಿಯಾದ ಗಂಗಾನದಿಯಲ್ಲಿ ಸ್ನಾನಮಾಡಿ ನಿತ್ಯಕರ್ಮಗಳನ್ನು ನೆರವೇರಿಸಿ ಶ್ರದ್ಧಾಭಕ್ತಿಪೂರ್ವಕವಾಗಿ ಪುರಾಣಪುರುಷನಾದ ಪರಮೇಶ್ವರನನ್ನು ಪೂಜಿಸುವ ಪವಿತ್ರಾಂತರಂಗರಾದ ಬ್ರಾಹ್ಮಣೋತ್ತಮರಿಗೆ ನಮಸ್ಕಾರವಾಗಲಿ.

ಕೃಶಾನು—ಕಲಿಪ್ರಭಾವದಿಂದ ಶಾಸ್ತ್ರೀಯಕರ್ಮವನ್ನು ಬಿಟ್ಟು ಶಾಸ್ತ್ರನಿಷಿದ್ಧಕರ್ಮಗಳನ್ನು ಮಾಡುವ ಬ್ರಾಹ್ಮಣರನ್ನು ನಮಸ್ಕರಿಸುವುದು ಸನ್ಯಾಯವೆ? ಸಾವಧಾನವಾಗಿ ಕೇಳು. ಪ್ರಾತಃಕಾಲದಲ್ಲಿ ಗಂಗಾನದಿಯಲ್ಲಿ ಸ್ನಾನಮಾಡಿದರೂ, ಅಗಸನು ಮುಟ್ಟಿ ಕತ್ತೆಯಮೇಲೆ ಹೊರಲ್ಪಟ್ಟ ಬಟ್ಟೆಗಳನ್ನು ಮೂಢರಾದ ಈ ಕಾಶೀನಗರದ ಜನರು ಧರಿಸಿ ಹೊರಗೆ ತಿರುಗಿ ಮ್ಲೇಚ್ಛ ಪಂಚಮಾದಿ ಹೀನಜಾತೀಯರನ್ನು ಮುಟ್ಟಿ ಮರಳಿ ಸ್ನಾನಮಾಡದೆ ನಿರ್ಲಜ್ಜರಾಗಿ ಊಟಮಾಡುವರು. ಇದು ಆಶ್ಚರ್ಯವಾಗಿದೆ. ಶಾಸ್ತ್ರವನ್ನು ಬಿಟ್ಟು ಶಸ್ತ್ರವೃತ್ತಿಯಿಂದ ಜೀವಿಸುವ ಈ ಜನರು ಶೂದ್ರರಿಂದ ತರಲ್ಪಟ್ಟ ನೀರಿನಿಂದ ಸ್ನಾನಪಾನಗಳಂ ಮಾಡುವದಲ್ಲದೆ ದೇವತಾಭಿಷೇಕವನ್ನೂ ಮಾಡುವರು; ಯವನಚಂಡಾಲಾದಿ ಸಂಪರ್ಕದಿಂದ ದೂಷಿತಚರಿತ್ರರಾಗಿರುವರು. ಪಂಜ್ತಿವಿದೂಷಕರಾದ ಮದ್ಯಪಾಯಿಗಳೊಡನೆ ನಿರ್ಭಯವಾಗಿ ಊಟಮಾಡುತ್ತಾರೆ. ವೇದಾಕ್ಷರವನ್ನರಿಯದ ಈ ಜನರು ಪರಲೋಕಭೀತಿಯಿಲ್ಲದವರಾಗಿ ಶ್ರುತಿ ಸ್ಮೃತಿ ನಿಷಿದ್ಧವಾದ ಕರ್ಮಗಳನ್ನು ಮಾಡುವರು. ಅನ್ಯದೇಶಗಳಿಂದ ಬರುವ ಜನರಿಗೆ "ಇವರು ಕರ್ಮಠರು, ದಾನಪಾತ್ರರು"

ಎಂಬ ಮೋಹವನ್ನುಂಟುಮಾಡುವುದಕ್ಕೋಸ್ಕರ ವೇಷಧಾರಿಗಳಾಗಿ ತಿರುಗುವರು. ಇಂತಹ ನೀಚರು ಸುಂದರಿಯಾಗಿಯೂ, ಸುಶೀಲೆಯಾಗಿಯೂ, ಇರುವ ಕನ್ಯೆಯನ್ನು ಮದುವೆಮಾಡಿಕೊಂಡು ಯುವತಿಯಾದರೂ ಭಾರ್ಯೆಯನ್ನು ಸ್ವದೇಶದಲ್ಲಿ ಬಿಟ್ಟು ದ್ರವ್ಯಾಶೆಯಿಂದ ಪರದೇಶದಲ್ಲಲೆಯುವರು. ಹೀಗೆ ಇವರ ದುರ್ವಿಧಿಯು ಈ ಲೋಕದಲ್ಲಿ ದಂಪತಿಗಳಿಗೆ ಪರಸ್ಪರಾಲಿಂಗನಾದಿ ಸೌಖ್ಯವನ್ನು ತಪ್ಪಿಸಿ ಪರಲೋಕಕ್ಕೆ ಸಾಧಕವಾದ ಸತ್ಕರ್ಮಗಳನ್ನು ಮಾಡದಿರುವುದರಿಂದ ಅಲ್ಲಿಯೂ ಇವರನ್ನು ದುಃಖಭಾಗಿಗಳನ್ನಾಗಿಯೇ ಮಾಡುವುದು. ಶ್ರುತಿ ಸ್ಮೃತಿ ವಿಚಾರದಿಂದ ಧರ್ಮಜ್ಞರಾಗದೆ ದುಸ್ತರ್ಕದಲ್ಲಿಯೂ, ವ್ಯರ್ಥಾಲಾಪಗಳಲ್ಲಿಯೂ, ಕಾಲವಂ ಕಳೆಯುವರು. ಆದುದರಿಂದ ಈ ಕಪಟ ಬ್ರಾಹ್ಮಣರು ಪ್ರಣಾಮಾರ್ಹರಲ್ಲ.

ವಿಶ್ವಾವಸು—ಬ್ರಾಹ್ಮಣರನ್ನು ದೂಷಿಸಿ ಪಾಪಕ್ಕೆ ಗುರಿಯಾಗಬೇಡ. ನೀನು ಹೇಳಿದ ಸುಚರ್ಯಾವಿಪರ್ಯಯವು ಕಲಿಯ ದೋಷವೇ ಹೊರತು ಬ್ರಾಹ್ಮಣರ ದೋಷವಲ್ಲ. ಕಲಿಯುಗದಲ್ಲಿ ಕೃತಯುಗಧರ್ಮವು ಹೇಗೆಸಂಭವಿಸುವುದು? ಅಧರ್ಮಪ್ರತಿಷ್ಠಾಪನೆಯಲ್ಲಿ ಬದ್ಧಕಂಕಣನಾದ ಕಲಿಯು ದುರ್ಜಯನಲ್ಲವೆ? ದುಷ್ಕರ್ಮಸಮೂಹಕ್ಕೆ ಆಶ್ರಯವಾಗಿಯೂ, ದುರಭಿಮಾನಕ್ಕೆ ಸ್ವರ್ಣಪೀಠವಾಗಿಯೂ, ವೇದವಚನಗಳಿಗೂ, ವೇದಕರ್ಮಗಳಿಗೂ ಪ್ರಳಯದಿನವಾಗಿಯೂ, ವಿತ್ತಾರ್ಜನೆಗೋಸುಗ ದುರ್ಮಾರ್ಗದಲ್ಲಿ ಪ್ರವರ್ತಿಸುವ ದುರುಳರಿಗೆ ನಾಟಕಮಂದಿರವಾಗಿಯೂ, ಇರುವ ಕಲಿಯು

ಗದಲ್ಲಿ ಸತ್ಕರ್ಮಾಚರಣೆಯು ದುಷ್ಕರವೆಂಬುವುದರಲ್ಲಿ ಸಂಶಯವೇನು? ಇಂತಹ ಕಲಿಯುಗದಲ್ಲಿಯೂ ಅನೇಕಶತಮಧ್ಯದಲ್ಲೊಬ್ಬನಾದರೂ ವೇದಗಳಲ್ಲಾದರೂ ಶಾಸ್ತ್ರೈಕದೇಶದಲ್ಲಾದರೂ ನಿಪುಣನಾಗಿ ಯಥಾಶಕ್ತಿ ಸತ್ಕರ್ಮಾಚರಣಪರನಾಗಿದ್ದಪಕ್ಷದಲ್ಲಿ ಸ್ತುತ್ಯರ್ಹನಾಗಲಾರನೆ? ನಿರ್ಜಲಪ್ರದೇಶದಲ್ಲಿ ನೀರಿನ ತೊಟ್ಟಾದರೂ ಶ್ಲಾಘನೀಯವಲ್ಲವೆ? ಕ್ಷತ್ರಿಯಕುಲವು ನಷ್ಟವಾದುದರಿಂದಲೂ,ತುರುಷ್ಕರೂ,ಯವನರೂ, ಪ್ರಭುಗಳಾದುದರಿಂದಲೂ ಬ್ರಾಹ್ಮಣರಿಗೆ ಯಾಜನಾಧ್ಯಾಪನಪ್ರತಿಗ್ರಹಗಳೆಂಬ ಕರ್ಮಗಳಿಗೆ ಅವಕಾಶವಿಲ್ಲ. ಬ್ರಾಹ್ಮಣರು ನಿರ್ಧನರಾದುದರಿಂದ ಯಜನಾಧ್ಯಯನದಾನಗಳೆಂಬ ಕರ್ಮಗಳನ್ನು ಮಾಡಲಾರರು. ಹೀಗೆ ಕಲಿದೋಷವು ದುರ್ನಿವಾರವಾದಾಗ್ಯೂ ಅಲ್ಲಲ್ಲಿ ಲೋಕೋತ್ತರನಾದ ಒಬ್ಬನಾದರೂ ಶ್ರದ್ಧೆಯೊಡನೆ ವೇದವಿಹಿತಸತ್ಕರ್ಮವನ್ನು ಪರಿಪಾಲಿಸುತ್ತಿರುವನು. ಗಂಗಾತೀರನಿವಾಸಿಯು ವೇದಧರ್ಮವನ್ನುಪೇಕ್ಷಿಸಿ, ಶಾಸ್ತ್ರನಿಷಿದ್ಧಕರ್ಮವನ್ನು ಮಾಡಿದರೂ ಮಹಾವಿಷ್ಣುವಿನ ಪಾದಕಮಲದಲ್ಲಿರುವ ನಖಮಣಿಗಳ ಕಾಂತಿಯಿಂದ ಪರಿಶುದ್ಧವಾದ ಭಾಗೀರಥಿಯ ಉದಕದಿಂದ ಚಿತ್ತಶುದ್ಧಿಯಂ ಪಡೆಯುವನು. ಆದಕಾರಣ ಅವನಗಿಂತಲೂ ಧನ್ಯನು ಯಾರೂ ಇಲ್ಲ.

ಈ ಕಲಿಯುಗದಲ್ಲಿಯೂ ಸಕಲವಿದ್ಯೆಗಳೂ ಗೌಡಕನ್ಯಾಕುಬ್ಜಮಿಥಿಲಪಾಂಚಾಲಾದಿ ದೇಶಗಳಲ್ಲಿ ಇರುವ ಪ್ರೌಢರಾದ ಪಂಡಿತರಲ್ಲಿ ನೆಲೆಗೊಂಡಿವೆ. ಇನ್ನೂ ಚೆನ್ನಾಗಿ ಕೇಳು. ಈ ದೇಶದಲ್ಲಿ ವಾಡಿಕೆಯಲ್ಲಿರುವ ಆಚಾ

ರಗಳು ಅನ್ಯದೇಶೀಯರಿಗೆ ಅಭಿಮತವಾದರೂ ಆಗದಿದ್ದರೂ ಹಾನಿಯೇನು? ಪ್ರಾಜ್ಞರಾದ ಪುತ್ರರು ತಂದೆತಾಯಿಗಳಿಗೆ ಸಮ್ಮತವಾದ ಕೆಲಸವನ್ನು ಮಾಡಿದರೆ ಆ ಕೆಲಸವು ಇತರರಿಗೆ ಅಪ್ರಿಯವಾದರೆ ದೋಷಿಯಾರು? ಕಾಶೀನಿವಾಸಿಗಳು ಪ್ರಾತಃಕಾಲದಲ್ಲಿ ಅತಿಶೀತಲವಾದ ಗಂಗಾನದಿಯ ಉದಕದಲ್ಲಿ ಮುಳುಗಿ ಆದಿತ್ಯಾಂಬಿಕಾವಿಷ್ಣುಗಣನಾಥಮಹೇಶ್ವರರನ್ನು ಪೂಜಿಸುತ್ತಾರೆ. ಹಸಿವಿನಿಂದ ಎಷ್ಟು ಪೀಡಿತರಾದರೂ ತಂಗಳನ್ನವನ್ನು ತಿನ್ನುವುದಿಲ್ಲ. ಗೋಮಯದಿಂದ ಸಾರಿಸಲ್ಪಟ್ಟ ಪ್ರದೇಶದಲ್ಲಿ ಅಡಿಗೆ ಮಾಡಿ ಊಟಮಾಡುವರು. ಅಪರಿಶುದ್ಧವಾದ ಸ್ಥಲದಿಂದ ತರಲ್ಪಟ್ಟ ಅನ್ನವನ್ನು ತಿನ್ನುವುದಿಲ್ಲ. ಇಂತಹ ಭೋಜನನಿಯಮವನ್ನು ಎಲ್ಲಾದರೂ ನೋಡಿರುವೆಯಾ? ಗಂಗಾಜಲದಲ್ಲಿ ಸ್ನಾನಪಾನಗಳನ್ನು ಮಾಡಿ ಬ್ರಾಹ್ಮಣತ್ವವನ್ನು ಕಾಪಾಡಿಕೊಂಡಿರುವ ವಾರಾಣಸೀಪುರನಿವಾಸಿಗಳು ದೂಷಣೀಯರೆಂದಿಗೂ ಆಗಲಾರರು ಎಂದು ನುಡಿದು ವಿಶ್ವಾವಸುವು ವಿಮಾನವನ್ನು ಮುಂದಕ್ಕೆ ತಳ್ಳಿ ಕೈಮುಗಿದುಕೊಂಡು ಪೇಳಿದನದೆಂತೆಂದರೆ—" ದೇವೇಂದ್ರನು ವಜ್ರಾಯುಧದಿಂದ ಪರ್ವತಗಳ ರೆಕ್ಕೆಗಳನ್ನು ಕತ್ತರಿಸಿದ ಕಾಲದಲ್ಲಿ ಮೈನಾಕಾದಿ ಪರ್ವತಗಳನ್ನು ಸಂರಕ್ಷಿಸಿ ಶರಣಾಗತರಕ್ಷಕನೆಂದು ಪ್ರಸಿದ್ಧನಾದ, ಚಂಚಲವಾದ ತರಂಗಗಳಿಂದೊಪ್ಪುತ್ತಿರುವ ಲೋಕಪೂಜ್ಯನಾದ ಸಮುದ್ರರಾಜನಿಗೆ ನಮಸ್ಕಾರವಾಗಲಿ"

ಕೃಶಾನು—ಉಪ್ಪಾಗಿರುವದರಿಂದ ಸಮುದ್ರೋದಕವನ್ನು ಪಾಮರರೂ ಕುಡಿಯುವುದಿಲ್ಲ. ತಿಮಿತಿಮಿಂಗಿಲಾದಿ

ಕ್ರೂರ ಜಲಜಂತುಗಳಿಂದಲೂ ಬಡಬಾಗ್ನಿಯಿಂದಲೂ ಕೂಡಿ ಘೋರವಾಗಿ ಮೊರೆಯುತ್ತಿರುವ ಸಮುದ್ರವನ್ನು ನಮಸ್ಕರಿಸಲೇಕೆಬಯಸುವಿ ? ವಜ್ರವೈಡೂರ್ಯಮರಕತ ಪುಷ್ಯರಾಗಾದಿರತ್ನಗಳಿಗೆ ಆಕರವಾದರೂ, ಲಕ್ಷ್ಮೀದೇವಿಗೆ ತೌರುಮನೆಯಾದರೂ ಹಣದಾಶೆಯುಳ್ಳ ವರ್ತಕರಿಗೆ ಒಂದು ಕಾಸನ್ನಾದರೂ ಕೊಡುವದಿಲ್ಲ. ಈ ಸಮುದ್ರದ ನೀರು ತೀರದಲ್ಲಿರುವ ವೃಕ್ಷಗಳಿಗೆ ಬಾಧಕವಾಗಿರುವಲ್ಲಿ ಸಸ್ಯಾಭಿವೃದ್ಧಿಗೆಂತು ಸಾಧಕವಾದೀತು ? ಸ್ನಾನಕ್ಕೆ ಅನರ್ಹವಾಗಿರುವಲ್ಲಿ ಪಾನಕ್ಕೆ ಯೋಗ್ಯವೆ? ಗಟ್ಟಿಯಾಗಿ ಗರ್ಜಿಸುವದಲ್ಲದೆ ದುಷ್ಟಜಂತುಗಳ ದೆಸೆಯಿಂದ ಭಯಂಕರವಾಗಿರುವ ಈ ಅಪಾರವಾದ ಸಮುದ್ರವನ್ನು ಸೃಷ್ಟಿಸಿದ ಬ್ರಹ್ಮನ ಆಶಯವೇನಿರಬಹುದು? ಅಗಸ್ತ್ಯನಿಂದ ಕುಡಿಯಲ್ಪಟ್ಟು ಮೂತ್ರದ್ವಾರೋದ್ಗೀರ್ಣವಾದುದರಿಂದ ಶಿಷ್ಟರಿಗೆ ಅಗ್ರಾಹ್ಯವಾದ ಈ ಸಮುದ್ರದ ನೀರನ್ನು ಪ್ರಯಾಣಿಕರು ಎಷ್ಟು ಬಾಯಾರಿಕೆಯಿಂದ ಪೀಡಿತರಾದರೂ ಕುಡಿಯುವದಿಲ್ಲ. ಆದುದರಿಂದ ಬ್ರಹ್ಮನು ಈ ಸಮುದ್ರವನ್ನು ಸೃಷ್ಟಿಸಿದುದು ನಿರರ್ಥಕವೆಂದು ತಿಳಿಯುತ್ತೇನೆ.

ವಿಶ್ವಾವಸು—ಸ್ನೇಹಿತನೆ! ಉಚ್ಚೈಶ್ರವಸ್ಸೆಂಬ ಕುದುರೆಯನ್ನು ಇಂದ್ರನಿಗೂ, ಲಕ್ಷ್ಮಿಯನ್ನು ವಿಷ್ಣುವಿಗೂ, ಕಲ್ಪವೃಕ್ಷ, ಅಮೃತ, ಕಾಮಧೇನು ಇವುಗಳನ್ನು ದೇವತೆಗಳಿಗೂ, ಚಂದ್ರನನ್ನು ಈಶ್ವರನಿಗೂ ಕೊಟ್ಟ ಸಮುದ್ರನನ್ನು ಮಿೂರಿಸಿದ ಧಾರ್ಮಿಕನು ಯಾರು? ಈ ಸಮುದ್ರನಿಗೆ ಜಹ್ನುತನಯೆಯಾದ ಗಂಗಾನದಿಯು ಭಾರ್ಯೆಯಾಗಿಯೂ,

ಸುಧಾನಿಧಿಯಾದ ಚಂದ್ರನುಪುತ್ರನಾಗಿಯೂ, ಧನ್ಯಳಾದ ಲಕ್ಷ್ಮಿಯು ಪುತ್ರಿಯಾಗಿಯೂ, ಜಗದೀಶ್ವರನೇ ಅಳಿಯನಾಗಿಯೂ ಇರುವರು. ಆದುದರಿಂದ ಸರ್ವಗುಣಾಕರನಾದ ಸಮುದ್ರನು ದೂಷಣೀಯನಲ್ಲ. ಸಮುದ್ರನ ದಕ್ಷಿಣತೀರವು ಭಗವತ್ಸಾನ್ನಿಧ್ಯದಿಂದ ಸೌಖ್ಯಾಸ್ಪದವಾಗಿಯೂ ಪರಿಶುದ್ಧವಾಗಿಯೂ ಯಕ್ಷಕಿನ್ನರಕಿಂಪುರುಷರಿಂದಧಿಷ್ಠಿತವಾಗಿಯೂ ಇರುವುದು. ಈ ಜಗನ್ನಾಥಕ್ಷೇತ್ರದಲ್ಲಿ ದೇಹತ್ಯಾಗವಂ ಮಾಡುವವರಿಗೆ ಮುಕ್ತಿಯು ಕರತಲಾಮಲಕವಾಗಿರುವುದು. ಮೃತಶರೀರವಾದರೋ ಅದಗ್ಧವಾದಾಗ್ಯೂ ದುರ್ಗಂಧಾದಿದೋಷರಹಿತವಾಗಿ ಕಾಷ್ಠದಂತೆ ಬಿದ್ದಿರುವುದು. ಆಶ್ಚರ್ಯ! ಸ್ವಾಮಿಗೆ ನಿವೇದಿಸಿದ ಅನ್ನವನ್ನು ಕುಲಶೀಲಾದಿಗಳಿಲ್ಲದ ನೀಚರು ತಂದರೂ ಭಕ್ತಿಯೊಡನೆ ತಿಂದರೆ ಸಕಲಪಾಪಗಳೂ ನಶಿಸಿ ಕೈವಲ್ಯವು ಸಿದ್ಧಿಸುವುದೆಂದು ಶಿಷ್ಟರು ಪೇಳುವರೆಂದು ನುಡಿದು ವಿಮಾನವನ್ನು ಮುಂದಕ್ಕೆ ಹೊರಡಿಸಿ ಕೃಶಾನುವಿನೊಡನೆ ಸರ್ವಸಂಪತ್ಸಮೃದ್ಧವಾದ ಸ್ವರ್ಗಸದೃಶವಾದ ಘೂರ್ಜರದೇಶವನ್ನು ಹೊಕ್ಕನು. ಪಚ್ಚಕರ್ಪೂರ, ಕೇಸರಿ, ಲವಂಗ ಮುಂತಾದ ಸಂಭಾರಗಳಿಂದ ಮಿಶ್ರವಾದ ತಾಂಬೂಲರಸದಿಂದ ರಂಜಿತವಾದ ಮುಖಗಳಿಂದಲೂ, ಸರ್ವಶ್ಲಾಘ್ಯವಾಗಿಯೂ, ಅಮೂಲ್ಯವಾಗಿಯೂ ಇರುವ ನಾನಾವಿಧವಾದ ವಸ್ತ್ರಗಳಿಂದಲೂ ಪ್ರಕಾಶಮಾನರಾಗಿ ಮಣಿಮಯವಾದ ಭೂಷಣಗಳಿಂದಲಂಕೃತರಾಗಿ ಪರಿಮಳಯುಕ್ತವಾದ ದೇಹಗಳಿಂದ ಹೊಳೆಯುತ್ತಿದ್ದ ಪುರುಷರು ತರುಣಿಯರೊಡನೆ ಪರಮಾನಂದದಿಂ ವಿಹರಿಸುತ್ತಿ

ದ್ದರು. ಈ ದೇಶದ ನಾರಿಯರೂಕೂಡ ಅನ್ಯಾದೃಶ ಸೌಂದರ್ಯವುಳ್ಳವರು. ತಪ್ತಕನಕಚ್ಛಾಯೆಯುಳ್ಳ ಶರೀರ ದಿಂದಲೂ, ತಾಮ್ರವಾಗಿಯೂ, ಕೋಮಲವಾಗಿಯೂ ಇರುವ ತುಟಿಗಳಿಂದಲೂ, ಎಳೆಚಿಗರುಗಳಂತಿರುವ ಹಸ್ತಗಳಿಂದಲೂ, ಅಮೃತಧಾರೆಯಂತೆ ಮಧುರವಾದ ವಾಣಿಯಿಂದಲೂ, ತಾವರೆ ಯಂತಿರುವ ವಕ್ತ್ರದಿಂದಲೂ, ನೀಲೋತ್ಪಲಗಳಂತಿರುವ ಕ ಣ್ಣುಗಳಿಂದಲೂ ಒಪ್ಪುತ್ತಿರುವ ಘೂರ್ಜರಾಂಗನೆಯರ ಅವ ಯವಗಳು ಯಾವ ಯುವಕರಿಗೆತಾನೇ ಮೋಹವನ್ನುಂಟು ಮಾಡಲಾರವು?

ಕೃಶಾನು—ನೀನು ಹೇಳಿದುದು ಸತ್ಯವೇ ಅಹುದು. ಆದರೆ ಘೂರ್ಜರರು ಸಾರವಸ್ತುಗಳನ್ನನುಭವಿಸುವದರಲ್ಲಿ ಚತುರರಲ್ಲ. ಘೂರ್ಜರ ಸ್ತ್ರೀಯರು ಸುಂದರಿಯರಾದರೂ ಲಜ್ಜಾತಿಶಯದಿಂದ ಗೂಢಮನ್ಮಥಾವಸ್ಥೆಯುಳ್ಳವರಾಗಿದಾ ರೆ. ಈ ಘೂರ್ಜರ ಯುವಕರು ವ್ಯಾಪಾರದಿಂದ ಹಣವನ್ನು ಸಂಪಾದಿಸಲೋಸುಗ ಮನೆಗಳನ್ನು ಬಿಟ್ಟು ದೂರದೇಶಗಳ ಲ್ಲಿ ಅಲೆಯುವರು.

ವಿಶ್ವಾವಸು—ಜಡಮತಿಯೇ! ಹಣವನ್ನು ಸಂಪಾದಿ ಸಲು ಪರದೇಶದಲ್ಲಿ ಅಲೆಯುವುದು ಘೂರ್ಜರರ ಗುಣವಿ ಶೇಷವೇ ಹೊರತು ದೋಷವಲ್ಲ. ದೇಶದೇಶದಲ್ಲಿಯೂ ಅತ್ಯ ದ್ಭುತವಾದ ವಸ್ತುಗಳನ್ನು ನೋಡಿ ಬಹಳವಾಗಿ ಧನವನ್ನು ಸಂಪಾದಿಸಿ ದೊಡ್ಡ ಮನೆಗಳನ್ನು ಕಟ್ಟಿ ಸಕಲೈಶ್ವರ್ಯಸಂಪ ನ್ನರಾಗಿರುವುರು. " ಯದೇಪ್ರೋಪನತಂದುಃಖಾತ್ಸುಖಂತ ದ್ರಸವತ್ತರಂ। ನಿರ್ವಾಣಾಯತರುಚ್ಛಾಯಾತಪ್ತಸ್ಯಹಿವಿಶೇಷ

ತಃ" ಎಂದರೆ ದುಃಖವನ್ನು ಅನುಭವಿಸಿದಮೇಲೆ ಎಳ್ಳಷ್ಟಾದರೂ ಸುಖವುಂಟಾದರೆ ಅದು ಮನುಷ್ಯನಿಗೆ ಪರಮ ಸಂತೋಷವನ್ನು ಕೊಡುವುದು. ಬಹಳವಾಗಿ ಬಿಸಿಲಿನಲ್ಲಿ ಬೆಂದು ಬಸವಳಿದ ಪ್ರಯಾಣಿಕನಿಗೆ ಮರದ ನೆಳಲು ಬಣ್ಣಿಸಲಸದಳವಾದ ಉಲ್ಲಾಸವನ್ನುಂಟುಮಾಡುವುದಲ್ಲವೆ? ಎಂಬಂತೆ ವಿರಹೋತ್ಕಂಠಿತರಾದರೂ ಪತಿವ್ರತೆಯರಾದ ಹೆಂಡತಿಯರೊಡನೆ ಅನಿರ್ವಾಚ್ಯವಾದ ಸೌಖ್ಯವನ್ನನುಭವಿಸುವರು. ಹಾಗಿಲ್ಲದೆ ಕೂಪಕೂರ್ಮಗಳಂತೆ ಮನೆಯಲ್ಲಿಯೇ ಅಲಸರಾಗಿ ಕುಳಿತಿದ್ದರೆ ಜಡತನದಿಂದಲೂ ಅತಿಪರಿಚಯದಿಂದಲೂ ಹೆಂಡತಿಯರಿಂದ ತಿರಸ್ಕೃತರಾಗಿಯೂ ರಾಜರ ಸಮೀಪದಲ್ಲಿ ಸಂಚರಿಸದೇ ಇರುವದರಿಂದ ಧೈರ್ಯವಿಲ್ಲದವರಾಗಿಯೂ ಈ ಜನರು ಮಂದಮತಿಗಳಾಗುವದರಿಂದ ಲೋಕದ ವೃತ್ತಾಂತವನ್ನು ಹೇಗೆ ತಿಳಿಯುವರು? ನಿಷ್ಪ್ರಯೋಜನವಾದ ಕಾರ್ಯಗಳಿಗೋಸ್ಕರ ಹೆಂಡತಿಯ ಮುಖವನ್ನು ನೋಡಿಕೊಂಡು ವ್ಯರ್ಥವಾಗಿ ಕಾಲವನ್ನು ಕಳೆಯುವ ಮರುಳನು ಅತಿ ದರಿದ್ರನಾಗುವನು. ಭೂಲೋಕದಲ್ಲಿ ಸುಖವಾಗಿರಬೇಕೆಂದಪೇಕ್ಷಿಸುವ ಪ್ರಾಜ್ಞನು ರಾಜಸಭೆಗೆ ಹೋಗಿ ತನಗೆ ಅನುಕೂಲವಾಗಿಯೂ ಪರರ ಕಿವಿಗೆ ಇಂಪಾಗಿಯೂ ಇರುವ ಮಾತುಗಳನ್ನಾಡಬೇಕು. ಕಾರ್ಯಕಾಲಗಳಲ್ಲಿ ರಾಜವಲ್ಲಭರಿಗೆ ಧನವಸ್ತ್ರಾದಿಕವನ್ನು ಕೊಡಬೇಕು. ನಿರಾಯಾಸವಾಗಿ ಹಣವನ್ನು ಸಂಪಾದಿಸಬೇಕು. ರಾಜವಲ್ಲಭರನ್ನು ತನಗೆ ಅನುಕೂಲರನ್ನಾಗಿ ಮಾಡಿಕೊಳ್ಳಬೇಕು. ತನ್ನ ಶಕ್ತಿಯನ್ನು ಮೀರದೆ ಪರರಿಗೆ ಉಪಕಾರವನ್ನೇ ಮಾಡಬೇಕು.

ಅಪಕಾರವನ್ನೆಂದಿಗೂ ಮಾಡಬಾರದು. ಐಶ್ವರ್ಯದಿಂದ ಮದಿಸಿದ ರಾಜನು ಹೇಳಿದ ವಾಕ್ಯವು ಯುಕ್ತವಾಗಲಿ ಅಯುಕ್ತವಾಗಲಿ ಸರಿಯೆಂದು ಶ್ಲಾಘಿಸಬೇಕು. ರಾಜಪುರೋಹಿತನು ಶುಂಠನಾದರೂ ಅವನನ್ನು ಸ್ತುತಿಸಬೇಕು. ಸ್ವಕಾರ್ಯವನ್ನು ಮಾಡಿಕೊಳ್ಳುವುದಕ್ಕೋಸ್ಕರವೂ ರಾಜನ ಅಭಿಪ್ರಾಯವನ್ನು ತಿಳಿಯಲೋಸುಗವೂ ಸಭೆಯಲ್ಲಿ ತನ್ನ ನಿಸ್ಪೃಹತ್ವವನ್ನು ಪ್ರಕಟಿಸಬೇಕು. ರಾಜನು ಸಂತುಷ್ಟನಾದಪಕ್ಷದಲ್ಲಿ ಸ್ವಕಾರ್ಯವನ್ನು ಗುಟ್ಟಾಗಿ ಆತನಿಗೆ ತಿಳಿಸಬೇಕು; ಎಂದು ನುಡಿದು ವಿಶ್ವಾವಸುವು ಕೃಶಾನುವನ್ನು ಯಮುನಾತೀರಕ್ಕೆ ಕರೆತಂದನು. „ಜಲಕ್ರೀಡೆಯಲ್ಲಿ ಶ್ರೀಕೃಷ್ಣನ ಸಂಬಂಧವುಳ್ಳ ಯಮುನಾನದಿಯೇ! ನಿನಗೆ ನಮಸ್ಕಾರ! ನಿನ್ನ ಜಲಬಿಂದುಗಳಿಂದ ನೆಂದ ಲತಾಗೃಹಗಳಿಗೆ ನಮಸ್ಕಾರ! ಶ್ರೀಕೃಷ್ಣನ ಆಲಿಂಗನೆಗೋಸುಗ ಈ ಲತಾಗೃಹಗಳಲ್ಲಿರುವ ಗೋಪಿಕಾಸ್ತ್ರೀಯರಿಗೆ ನಮಸ್ಕಾರ! ಈ ಗೋಪಿಕಾಂಗನೆಯರಿಂದ ಸೇವಿಸಲ್ಪಟ್ಟ ಶ್ರೀಕೃಷ್ಣನಿಗೆ ನಮಸ್ಕಾರ!'' ವೆಂಬೀ ವಾಕ್ಯಗಳನ್ನು ಬಾರಿಬಾರಿಗೂ ಉಚ್ಚರಿಸೋಣವೆಂದು ವಿಶ್ವಾವಸುವು ನುಡಿದನು.

ಕೃಶಾನು—ಎಲೈ, ಮಿತ್ರನೆ! ಜಗತ್ತಿನ ಸೃಷ್ಟಿಸ್ಥಿತಿಲಯಗಳಿಗೆ ಕಾರಣನಾದ ಜಾರಚೋರಶಿಖಾಮಣಿಯಾದ ಕೃಷ್ಣನಿಗೆ ನಮಸ್ಕಾರಗಳು ಸಾಕು ಸಾಕು! ಹೆರರ ಮನೆಯಲ್ಲಿ ಬೆಣ್ಣೆಯನ್ನು ಕದ್ದು ಕದ್ದೆನೆಂಬ ಹೆದರಿಕೆಯಿಂದ ಅದರುವ ಕಣ್ಣುಗಳುಳ್ಳವನಾಗಿ ಬೆಣ್ಣೆಯನ್ನು ತಿನ್ನುತ್ತಿರುವನು, ಇಂತಹ ಸಮಯದಲ್ಲಿ ಗೋಪಿಯರು ತಾಯಿಯಾದ ಯಶೋ

ದೆಯು ಬಳಿಗೆ ಕೃಷ್ಣನನ್ನು ಬಲಾತ್ಕಾರದಿಂದ ಕರೆದುಕೊಂಡು ಬಂದಮೇಲೆ "ಮಾನವನೀತಂ ಲುಂಟೇಃ ಎಂದರೆ ಬೆಣ್ಣೆಯನ್ನು ಕದಿಯಬೇಡವೆಂದು ನಿನಗೆ ಹೇಳಿದ್ದರೂ ಅದನ್ನು ಏತಕ್ಕೆ ಅಪಹರಿಸಿದೆ ?" ಎಂದು ಯಶೋದೆಯು ನುಡಿಯಲು ಕೃಷ್ಣನು "ಬೆಣ್ಣೆಯನ್ನು ನಾನು ಕದಿಯಲಿಲ್ಲ. ಆದರೆ ಮನುಷ್ಯರ ನಯವನ್ನು ಮಾತ್ರ ಅಪಹರಿಸಿದೆನು" ಎಂದು ಹೇಳಿ ತಾಯಿಯಲ್ಲಿಯೇ ದೋಷಾರೋಪಣೆಯಂ ಮಾಡಿದನು. ಚಂಚಲಾಕ್ಷಿಯಾದ ಒಬ್ಬ ಗೋಪಿಯ ಭುಜದಮೇಲೆ ಪರಿಹಾಸಕ್ಕೋಸುಗ ಕೃಷ್ಣನು ಒಂದು ಗಿಳಿಯನ್ನಿಟ್ಟನು. ಆ ಗೋಪಿಯು "ಅಂಸಂಗತಂ ಶುಕಮಿಹಾಪನಯ—ಎಂದರೆ ಭುಜದಮೇಲಿರುವ ಗಿಳಿಯನ್ನೀಗ ತೆಗೆ" ಎಂದು ಹೇಳಲು ಶ್ರೀಕೃಷ್ಣನು ಹಾಗೆಯೇ ಮಾಡುವೆನೆಂದು ಹೇಳಿ, 'ಅಂ' ಎಂಬ ಅಕ್ಷರದಿಂದ ಕೂಡಿರುವ 'ಶುಕಂ' ಎಂದರೆ ಅಂಶುಕಂ=ವಸ್ತ್ರವನ್ನು ತೆಗೆ ಎಂದು ಅರ್ಥಮಾಡಿಕೊಂಡು ಆ ಗೋಪಿಯ ವಸ್ತ್ರವನ್ನಪಹರಿಸಿದನು. ರಾತ್ರಿಯನ್ನೆಲ್ಲಾ ರಾಧಿಕಾ ಎಂಬ ಗೋಪಿಯೊಡನೆ ಕಳೆದು ಬೆಳಿಗ್ಗೆ ಮನೆಗೆ ಹೊರಟ ಕೃಷ್ಣನು "ತ್ವಂ ಪುನಃ ಅಪರಾಧಿಕಃ ಮಾಭೂಃ ಎಂದರೆ ಅಪರಾಧಿಯಾಗಬೇಡ" ಎಂದು ಹೆಂಡತಿಯಾದ ನೀಲಾದೇವಿಯಿಂದ ಹೇಳಲ್ಪಟ್ಟವನಾಗಿ "ನೀಲೆ, ರಾಧಿಕೆಯಿಂದ ವಿಯುಕ್ತನಾಗಬೇಡವೆಂದು ನೀನು ಹೇಳಿದ ಪ್ರಕಾರವಾಗಿ ರಾಧಿಕೆಯೊಡನೆಯೇ ಇರುವೆನು" ಎಂದು ನುಡಿದು ನೀಲಾದೇವಿಯನ್ನು ವ್ಯಾಮೋಹಪಡಿಸಿದನು. ಆದುದರಿಂದ ಜಾರಚೋರನಾದ ಕೃಷ್ಣನು ನಿಂದ್ಯನೇ ಅಹುದು.

ವಿಶ್ವಾವಸು—ಮಿತ್ರನೆ! ಹೀಗೆ ನುಡಿಯಬೇಡ. ಪರಮಪಾವನನಾಗಿಯೂ, ಜಗತ್ತಿನ ಪಾಪವನ್ನು ಸಂಹರಿಸಿ ಧರ್ಮಸಂಸ್ಥಾಪನೆಗಾಗಿಯೇ ಅವತರಿಸಿದವನಾಗಿಯೂ, ಭಕ್ತರಿಗೆ ಅನವರತವೂ ಸಂತೋಷವನ್ನುಂಟುಮಾಡುವವನಾಗಿಯೂ, ಇರುವ ಯದುನಂದನನಾದ ಶ್ರೀ ಕೃಷ್ಣನು ಎಷ್ಟುಮಾತ್ರವೂ ನಿಂದಾರ್ಹನಲ್ಲ. ಪರಮಪುರುಷನಾದ ಈತನ ಅತ್ಯದ್ಭುತವಾದ ಚರಿತ್ರೆಯನ್ನು ಸಾವಧಾನವಾಗಿ ಕೇಳು. ಲೋಕದಲ್ಲಿ ಕಳ್ಳನು ಕದಿಯುವುದು ಎಲ್ಲರಿಗೂ ತಿಳಿದಿರುವದಷ್ಟೆ. ಕಳ್ಳತನವೇ ಕದಿಯುವುದನ್ನೆಂದೂ ನೋಡಿದುದಿಲ್ಲ. ಕೃಷ್ಣನ ಕಳ್ಳತನವಾದರೋ ಕೇಳಲ್ಪಟ್ಟರೆ ಪಾಪಗಳು ಓಡಿಹೋಗುವವು. ಕೃಷ್ಣನು ಅವತರಿಸಿ ಕಂಸನನ್ನು ಸಂಹರಿಸಿದನು. ಲೋಕಕಂಟಕನಾದ ಅಘಾಸುರನ ಗರ್ವವನ್ನು ಮುರಿದನು. ಹಂಸಾಸುರನು ಹಿಂಸೆಯನ್ನು ಹೊಂದಿದನು. ಕೃಷ್ಣನ ಕೀರ್ತಿಯು ಮೂರು ಲೋಕಗಳಲ್ಲಿಯೂ ಹರಡಿತು. ಮುರಾಸುರನನ್ನು ಸಂಹರಿಸಿ, ಬಾಣಾಸುರನ ಮದವನ್ನಡಗಿಸಿ, ಬಲಾಸುರನ ಬಲವನ್ನಪಹರಿಸಿ, ನರಕಾಸುರಮರ್ದನವಂ ಮಾಡಿ, ಇಂದ್ರನ ಗರ್ವವನ್ನು ಮುರಿದು, ದೀನರಕ್ಷಣೆಯಂ ಮಾಡಿ, ಭಕ್ತವತ್ಸಲನೆಂದು ಪ್ರಸಿದ್ಧನಾದ ಸರ್ವಜನವಂದ್ಯನಾದ ಶ್ರೀಕೃಷ್ಣನಿಗೆ ನಮಸ್ಕಾರವೆಂದು ಮುಂದಕ್ಕೆ ಪ್ರಯಾಣಮಾಡಿ ದಂಡಕಾದಿವನಗಳನ್ನೂ, ಮಹಾರಾಷ್ಟ್ರಾದಿದೇಶಗಳನ್ನೂ, ನರ್ಮದಾದಿನದಿಗಳನ್ನೂ, ವಿಂಧ್ಯಾದಿಪರ್ವತಗಳನ್ನೂ ನೋಡಿ ಈಶ್ವರನನ್ನು ಕುರಿತು ವಿಶ್ವಾವಸುವು ಹೇಳಿದನದೆಂತೆಂದರೆ :—ಪರ

ಮೇಶ್ವರನೆ! ಎಷ್ಟು ಮೂಲಿಕೆಗಳನ್ನು ಸೃಷ್ಟಿಸಿದೆ! ಎಷ್ಟು ವೃಕ್ಷಗಳನ್ನು ನಿರ್ಮಿಸಿದೆ! ಎಷ್ಟು ಸಾಗರಗಳನ್ನು ಸೃಜಿಸಿದೆ! ಎಷ್ಟು ದೇಶಗಳನ್ನು ಕಲ್ಪಿಸಿದೆ! ಎಷ್ಟು ಪುಣ್ಯಕ್ಷೇತ್ರಗಳನ್ನುಂಟುಮಾಡಿದೆ! ಎಷ್ಟು ಪುಣ್ಯತೀರ್ಥಗಳನ್ನೇರ್ಪಡಿಸಿದೆ! ಎಷ್ಟು ಪ್ರಾಣಿಗಳನ್ನು ಹುಟ್ಟಿಸಿದೆ! ನಿನ್ನ ಪ್ರಭಾವವು ಅಪ್ರಮೇಯವಾದುದೆಂದು ನುಡಿದು ಈಶ್ವರನ ಮಹಿಮೆಯನ್ನು ವರ್ಣಿಸುತ್ತಾ ಮುಂದಕ್ಕೆ ತೆರಳಿ ಮಹಾರಾಷ್ಟ್ರದೇಶಕ್ಕೆ ಬಂದು ಹೇಳಲಾರಂಭಿಸಿದನದೆಂತೆಂದರೆ:—ಮಧುರವಾದ ನೀರಿನಿಂದಲೂ, ನಿರುಪಮಪ್ರಕಾಶದಿಂದಲೂ, ಸ್ವರ್ಗದಂತಿರುವ ಈ ಮಹಾರಾಷ್ಟ್ರದೇಶವು ಸರ್ವೋತ್ಕೃಷ್ಟವಾಗಿದೆ. ಈ ದೇಶದಲ್ಲಿ ಸಕಲಕಲ್ಯಾಣಗುಣಗಳಿಂದಲೂ, ಅನಿರ್ವಚನೀಯವಾದ ಮಹಿಮೆಯಿಂದಲೂ, ವಿಭವಾತಿಶಯದಿಂದಲೂ ಒಪ್ಪುತ್ತಿರುವ ಗೃಹಸ್ಥರೆಂಬ ಬ್ರಾಹ್ಮಣರು ಶ್ರದ್ಧಾವಿನಯಪೂರ್ವಕವಾಗಿ ಅತಿಥಿಪೂಜೆಯಂ ಮಾಡುವರು.

ಕೃಶಾನು—ಸಖನೆ! ಪೂರ್ವಕಾಲದ ಸ್ಥಿತಿಯನ್ನು ಈಗ ವರ್ಣಿಸಬೇಡ; ಪ್ರಾತಃಕಾಲದಿಂದ ಸಾಯಂಕಾಲದವರೆಗೂ ವ್ಯಾಪಾರದಲ್ಲಿ ಹೊರಗೆ ಕಾಲವಂ ಕಳೆದು ತರುವಾಯ ಮನೆಗೆ ಬಂದು ಸ್ನಾನಮಾಡಿ ಮೂರು ಸಂಧ್ಯಾವಂದನೆಗಳನ್ನೂ ಒಂದೇ ಕಾಲದಲ್ಲಿ ಈ ದ್ವಿಜರು ಮಾಡುವರು. ಆಯಾ ಸಂಧ್ಯಾವಂದನೆಯನ್ನು ಆಯಾ ಕಾಲದಲ್ಲಿ ಎಂದಿಗೂ ಮಾಡುವದಿಲ್ಲ. ಯಾಜನಾಧ್ಯಾಪನಪ್ರತಿಗ್ರಹಾತ್ಮಕವಾದ ಸ್ವವೃತ್ತಿಯನ್ನು ಬಿಟ್ಟು ಬ್ರಾಹ್ಮಣ ಕುಲದಲ್ಲಿ ಹುಟ್ಟಿದವರಾದಾಗ್ಯೂ ಕರಣಿಕರಾಗಿ ನೀಚವೃತ್ತಿಯಿಂದ ಜೀವಿಸುವರು.

ಶುಭಲಗ್ನಾದಿ ಕಾಲನಿಯಮಗಳನ್ನನುಸರಿಸದೆ ಶಾಸ್ತ್ರೋಕ್ತ ವಿಧಿಯನ್ನಪೇಕ್ಷಿಸಿ ಉತ್ಸವೈಕಪ್ರಧಾನರಾಗಿ ಚೌಲೋಪನಯನಾದಿ ಸಂಸ್ಕಾರಗಳನ್ನಾಚರಿಸುವರು. ವೇದಾಧ್ಯಯನಕ್ಕೆ ಅರ್ಹವಾದ ಕಾಲದಲ್ಲಿ ಹೂಣಭಾಷಾಭ್ಯಾಸವನ್ನು ಇವರು ಒಂದು ಕ್ಷಣವಾದರೂ ಬಿಟ್ಟಿರುವದಿಲ್ಲ. ಯಾವಾಗಲೂ ದೇಶಭಾಷಾಭ್ಯಾಸದಲ್ಲಿ ನಿರತರಾದ ಜಡಮತಿಗಳಾದ ಗೃಹಸ್ಥರೆಂಬೀ ಬ್ರಾಹ್ಮಣರು ಮಂತ್ರಗಳನ್ನುಚ್ಚರಿಸುವ ರೀತಿಯನ್ನರಿಯದೆ ಸಂಧ್ಯಾವಂದನಾದಿ ಕರ್ಮಗಳನ್ನು ಮೌನದಿಂದಲೇ ಮಾಡುವರು. ವಂಶಪಾರಂಪರ್ಯದಿಂದ ಗ್ರಾಮಗಣಿಕರಾದ ಶೂದ್ರಸಮಾನರಾದ ಈ ಮಹಾರಾಷ್ಟ್ರದೇಶೀಯರಿಗೆ ಬ್ರಾಹ್ಮಣ್ಯವೆಲ್ಲಿಯದು? ಇವರು ಯವನರಾಜರಿಗೆ ಭೃತ್ಯರಾಗಿ ಅವರಿಂದ ವೇತನವಂ ಪಡೆಯುವರು. ಇದು ಹಾಗಿರಲಿ. ಲೆಕ್ಕ ಮಾಡುವದರಲ್ಲಿ ನಿಪುಣರಾದವರಿಂದ ರಾಜರನ್ನು ಮೋಸಗೊಳಿಸಿ ಸ್ವರ್ಣಸ್ತೇಯವಂ ಮಾಡುವರು. ಆಶ್ಚರ್ಯ! ದುಸ್ಸಹವಾದ ನರಕಯಾತನೆಗೆ ಕಾರಣವಾದ ರಾಜದ್ರೋಹಕ್ಕಿಂತಲೂ ತುಚ್ಛವಾದ ಪಾತಕವುಂಟೆ? ರಾತ್ರಿಯಲ್ಲಿ ಮನೆಯನ್ನು ಪ್ರವೇಶಿಸಿ ದ್ರವ್ಯವನ್ನು ಕದಿಯುವವರು ಕೆಲವರು; ಬಲಾತ್ಕಾರದಿಂದ ದಾರಿಯಲ್ಲಿ ಜನರನ್ನು ಹಿಂಸಿಸಿ ಹಗಲೇ ಲೂಟಿ ಮಾಡುವವರು ಕೆಲವರು; ಇಂತಹವರು ರಾಜದ್ರೋಹವನ್ನು ಮಾಡದಿದ್ದರೂ ಕಳ್ಳರೆಂಬ ಲೋಕಾಪವಾದಕ್ಕೆ ಗುರಿಯಾಗುವರು. ಈ ಮಹಾರಾಷ್ಟ್ರ ಜನರಾದರೋ ಸಂಖ್ಯಾವಿಪರ್ಯಯದಿಂದ ರಾಜವಿತ್ತವನ್ನಪಹರಿಸಿದರೂ ಎಲ್ಲೆಲ್ಲಿಯೂ ಪುರಸ್ಕರಿಸಲ್ಪಡುವರು. ಇದು ನ್ಯಾಯವೆ?

ಇದು ಅನುಪಮವಾದ ದೇಶವೆಂದು ನೀನು ಹೇಳಿದುದು ಯುಕ್ತವೇ ಅಹುದು. ಹೇಗೆಂದರೆ:—ಇಲ್ಲಿ ಸ್ವಲ್ಪ ಪ್ರಯತ್ನದಿಂದಲೇ ಅಧಿಕವಾದ ಪ್ರತಿಷ್ಠೆಯುಂಟಾಗುವುದು. ಈ ದೇಶದಲ್ಲಿ ಹತ್ತುವೇದಾಕ್ಷರಗಳನ್ನು ತಿಳಿದವನೇ ವೇದವ್ಯಾಸನು. ಒಂದು ಶ್ಲೋಕವನ್ನು ಪಠಿಸುವವನೇ ಬೃಹಸ್ಪತ್ಯಾಚಾರ್ಯನು. ಚನ್ನಾಗಿ ಅಗ್ನಿಕಾರ್ಯವನ್ನು ಮಾಡುವವನೇ ಸೂತ್ರಕಾರನಾದ ಆಪಸ್ತಂಬ ಮಹರ್ಷಿಯು.

ವಿಶ್ವಾವಸು—ಎಲೈ ದೋಷೈಕಗ್ರಾಹಿಯೇ! ಈ ಮಹಾರಾಷ್ಟ್ರದೇಶದಲ್ಲಿಯೂ ಅಗ್ನಿಹೋತ್ರಪರರಾಗಿ, ಶಾಸ್ತ್ರವಿಚಕ್ಷಣರಾಗಿ, ಶಾಂತಿಯುಕ್ತರಾಗಿ, ಅಂತರ್ಮುಖರಾಗಿ, ಅನವರತವೂ ಆತ್ಮವಿಚಾರವಂ ಮಾಡುವವರಾಗಿ, ಶಬ್ದಸ್ಪರ್ಶಾದಿಗಳಿಂದ ಅಬಾಧಿತರಾಗಿ ಅನೇಕರಿರುವರು. ಈ ಮಹಾರಾಷ್ಟ್ರ ಬ್ರಾಹ್ಮಣಸಮೂಹವು ಸೇನಾಧಿಪತ್ಯವನ್ನು ವಹಿಸಿ, ದೇಶಾಧಿಕಾರವನ್ನು ಮಾಡಿ, ಬ್ರಾಹ್ಮಣರ ವೃತ್ತಿಯನ್ನು ಪರಿಪಾಲಿಸದಿದ್ದರೆ ಯವನರಿಂದ ಆಕ್ರಾಂತವಾದ ಈ ಭೂಮಂಡಲವು ಬ್ರಾಹ್ಮಣರಹಿತವಾಗುತ್ತಿತ್ತು. ವೇದವಿದ್ಯೆಯನ್ನು ಬಿಟ್ಟು ಯವನವಿದ್ಯೆಯನ್ನು ಅಭ್ಯಸಿಸುವರೆಂದು ನೀನು ಅವರನ್ನು ದೂಷಿಸಿದೆ. ಈ ದೋಷವು ಅವರು ಸಾಧುಜನಗಳಿಗೆ ಮಾಡುವ ಉಪಕಾರದಿಂದ ಪರಿಹರಿಸಲ್ಪಡುವುದು. ಪ್ರಸಿದ್ಧನಾದ ಒಬ್ಬ ಬ್ರಾಹ್ಮಣೋತ್ತಮನಿಗೆ ಮಹಾರಾಷ್ಟ್ರಜನರುಮಾಡಿದ ಒಂದು ಉಪಕಾರವು ಇವರ ಅಸಂಖ್ಯಾಕಗಳಾದ ಪಾಪಗಳನ್ನು ಒಂದು ಕ್ಷಣದಲ್ಲಿ ಧ್ವಂಸಮಾಡುವುದು ತೀಕ್ಷ್ಣವಾದ ಕೊಡಲಿಯು ಅನೇಕ ವಿಷವೃಕ್ಷಗಳನ್ನಾದರೂ ಕಡಿಯಬಲ್ಲದು.

ಕೃಶಾನು—ಇರಲಿ! ಈ ದೇಶದಲ್ಲಿರುವ ಬ್ರಾಹ್ಮಣೇತರರ ನಡತೆಯು ಅತಿದೂಷಣೀಯವು. ದೇಶದೇಶದಲ್ಲಿಯೂ ಪರದ್ರವ್ಯವನ್ನಪಹರಿಸಲೋಸುಗ ಸಂಚರಿಸುತ್ತಾ ಬ್ರಾಹ್ಮಣಾದಿಸಕಲವರ್ಣದವರನ್ನೂ ಹಿಂಸಿಸುವದಲ್ಲದೆ ಅವರ ಧನವನ್ನೆಲ್ಲಾ ಅಪಹರಿಸಿ ಇವರು ಹೊಟ್ಟೆಯನ್ನು ತುಂಬಿಕೊಳ್ಳುವರು.

ವಿಶ್ವಾವಸು—ಸ್ಪಷ್ಟಯವು. ಆದಾಗ್ಯೂ ಇವರ ಚರ್ಯೆಗಳು ಸಹನೀಯವೇ ಅಹುದು. ವೈರಿಗಳಾದ ತುರುಷ್ಕರಾಜರಿಗೆ ಭಯಾವಹವಾಗಿಯೂ, ಯುದ್ಧದಲ್ಲಿ ಅಪರಾಜಿತವಾಗಿಯೂ ಇರುವ ಈಮಹಾರಾಷ್ಟ್ರಭಟರ ಸಮೂಹವು ಸಂಚರಿಸದಿದ್ದರೆ ದೇವಬ್ರಾಹ್ಮಣರನ್ನು ದ್ವೇಷಿಸುವ ತುರುಷ್ಕರು ಪ್ರಬಲರಾಗಿ ನಿರ್ವಿಘ್ನವಾಗಿ ಈ ದೇಶವನ್ನೆಲ್ಲ ಆಕ್ರಮಿಸಿ ಇಲ್ಲಿನ ದೇವಾಲಯಗಳನ್ನೂ ಬ್ರಾಹ್ಮಣರನ್ನೂ ನಾಶವಾ ಮಾಡುತ್ತಿದ್ದರು. ದೇವಬ್ರಾಹ್ಮಣರ ಹಿತಕ್ಕೋಸ್ಕರ ಮ್ಲೇಚ್ಛರನ್ನು ಸಂಹರಿಸುವ ಮಹಾರಾಷ್ಟ್ರದೇಶೀಯರ ನಡತೆಯನ್ನು ಹೇಗಾದರೂ ಜನರು ಸಹಿಸಬೇಕು. ದೇಹಾರೋಗ್ಯವನ್ನಪೇಕ್ಷಿಸುವ ರೋಗಿಗಳು ಅನೇಕರೋಗಗಳನ್ನು ನಾಶಮಾಡುವ ಔಷಧಗಳನ್ನು ಎಷ್ಟು ಕಹಿಯಾದರೂ ಸ್ವೈರಣೆಯಿಂದ ಸೇವಿಸಬೇಕು, ಎಂದು ನುಡಿದು ಮುಂದಕ್ಕೆ ಪ್ರಯಾಣಮಾಡಿ ವಿಶ್ವಾವಸುವು ಕೃಶಾನುವಿಗೆ ನುಡಿದನದೆಂತೆಂದರೆ:—ಅಗೋ! ಇಲ್ಲಿ ನೋಡು ಕೆಲವರು ಮಹಾತ್ಮರು ಅಂಗ, ವಂಗ, ಕಳಿಂಗ, ಮಗಧ, ಕುರು, ಕೋಸಲ, ಕೇಕಯ, ಕಾಶ್ಮೀರ, ಕುಂತಲ, ಯವನ, ಪಾಂಚಾಲ, ಕೇರಳ, ನೇಪಾ

ಳ, ಪಾಂಡ್ಯ, ತುಂಡೀರ, ಕರ್ಣಾಟ, ಗೌಡ, ಲಾಟ, ದೇಶಗಳ ಲ್ಲಿ ಪರರ ಹಿತಕ್ಕೋಸ್ಕರವೇ ಸಂಚರಿಸುತ್ತಿರುವರು.

ಕೃಶಾನು—ನಿಂದನೀಯರಾದ ಇವರನ್ನು ಮಹಾತ್ಮ ರೆಂದು ಏತಕ್ಕೆ ಸ್ತೋತ್ರಮಾಡುತ್ತೀಯೆ?

ಇವರು ಭಿನ್ನಜಾತೀಯರಾದರೂ, ಕಲಿಬಲದ ದೆಸೆಯಿಂದ ಏಕೀಭವಿಸಿ,ವೈರಾಗ್ಯವನ್ನು ಅಭಿನಯಿಸುತ್ತಾ,ವರ್ಣಾಶ್ರಮ ಧರ್ಮಗಳನ್ನು ಪರಿತ್ಯಾಗಮಾಡಿ, ನಿಷ್ಕಲ್ಮಷರಾದ ವೈದಿಕ ರನ್ನು ದೂಷಿಸುತ್ತಾ, ದಾರಿದ್ರ್ಯದಿಂದ ಸಂತಪ್ತರಾಗಿ, ಪಂಚ ನಾಪರರಾಗಿ, ಉದರಪೋಷಣೆಗೋಸ್ಕರ ದಿಕ್ಕುವಿದಿಕ್ಕುಗಳಲ್ಲಿ ಯೂ ಭಿಕ್ಷಾಟನೆಯಂ ಮಾಡುವರು. ಪವಿತ್ರಚರಿತ್ರರಾದ ವಿಶ್ವಾಮಿತ್ರಾದಿ ಮಹರ್ಷಿಗಳಿಂದ ಘೋರವಾದ ತಪಸ್ಸಿನಿಂದ ಸಂಪಾದಿತವಾದ ಬ್ರಾಹ್ಮಣ್ಯವನ್ನು ಜನ್ಮದಿಂದಲೇ ಹೊಂದಿದ ಈ ನರಾಧಮರು ವೇದಬಾಹ್ಯರಾದ ಪಾಷಂಡರೊಡನೆ ಕಲಿತು ಬ್ರಹ್ಮಣ್ಯವನ್ನು ಹೋಗಲಾಡಿಸಿಕೊಂಡು ಭ್ರಷ್ಟರಾಗಿರು ವರು.

ವಿಶ್ವಾವಸು—ಅಚ್ಯುತನಲ್ಲಿ ದೃಢವಾದ ಭಕ್ತಿಯಿದ್ದ ರೆ ಪಾಪಗಳಿಗೇತಕ್ಕಂಜಬೇಕು? ಪ್ರಜ್ವಲಿಸುತ್ತಿರುವ ದೀಪ ವಿದ್ದರೆ ಕತ್ತಲೆಯಿಂದ ಹೆದರಿಕೆಯೇಕೆ? ಹರಿಹರರಲ್ಲಿ ದೃಢ ವಾದ ಭಕ್ತಿಯುಳ್ಳ ಜನರ ಅಜ್ಞಾನವು ನಷ್ಟವಾಗುವುದು. ಪಾಪಗಳು ನಿರ್ಮೂಲವಾಗಿ ಪರಿಹರಿಸಲ್ಪಡುವವು. ಮನೋ ರಥಗಳು ಸಿದ್ಧಿಸುವುವು. ಹೇಗೆಂದರೆ:—ಶ್ರೀ ರಾಮಭದ್ರನ ಒಂದೇ ಬಾಣವು ಏಳುಸಾಲವೃಕ್ಷಗಳನ್ನೂ, ಅವುಗಳಿಗೆ ಆಶ್ರಯವಾದ ಶೈಲವನ್ನೂ, ಅದಕ್ಕಾಶ್ರಯವಾದ ರಸಾತ

ಲವನ್ನೂ ಭೇದಿಸಿತು. ಕಾಶೀಕಾಂಚ್ಯಾದಿ ದಿವ್ಯಕ್ಷೇತ್ರ ಯಾತ್ರಾಪರರಾಗಿರುವದರಿಂದ ಈಷಣತ್ರಯರಹಿತರಾಗಿಯೂ, ಗಂಗಾದಿಪುಣ್ಯತೀರ್ಥಗಳಲ್ಲಿ ಸ್ನಾನಮಾಡಿ ನಿರ್ಮಲಾಂತಃಕರಣರಾಗಿಯೂ ಇರುವ ಈ ಪುಣ್ಯಪುರುಷರನ್ನು ನಿತ್ಯಾನಿತ್ಯವಸ್ತುವಿವೇಕವುಳ್ಳವರು ಆದರಿಸತಕ್ಕದು; ಎಂದು ವಿಮಾನವನ್ನು ಮುಂದಕ್ಕೆತಳ್ಳಿ ಕೃಶಾನುವನ್ನು ಕುರಿತು ವಿಶ್ವಾವಸುವು ನುಡಿದನದೆಂತೆಂದರೆ—

ಸದಾಚಾರಸಂಪನ್ನರಾದ, ಮಹಸೀಯರಾದ ಬ್ರಾಹ್ಮಣರಿಂದೊಪ್ಪುತ್ತಿರುವ ಆಂಧ್ರದೇಶವನ್ನು ನೋಡು.

ಕೃಶಾನು—ವರ್ಣಾಶ್ರಮಧರ್ಮಭ್ರಷ್ಟವಾದ ಈ ದೇಶವನ್ನೇತಕ್ಕೆ ಶ್ಲಾಘಿಸುತ್ತೀಯೆ? ಪ್ರತಿ ಒಂದು ಹಳ್ಳಿಯಲ್ಲಿಯೂ ಶೂದ್ರನು ಪ್ರಭುವಾಗಿದಾನೆ. ಅವನ ಸಮೀಪದಲ್ಲಿ ಬ್ರಾಹ್ಮಣನು ಸೇವಕನಾಗಿ ಗ್ರಾಮದ ಆಯವ್ಯಯವನ್ನು ಹೇಳುತ್ತಾನೆ. ಮರುಭೂಮಿಯಲ್ಲಿ ಸರೋವರದಂತೆ ಅಲ್ಲಲ್ಲಿ ವೇದಾಧ್ಯಯನವಂ ಮಾಡಿದವನೊಬ್ಬನಿದ್ದರೂ ಅವನು ಅತಿನೀಚವೃತ್ತಿಯಿಂದ ಜೀವಿಸುತ್ತಾನೆ. ಆದಕಾರಣ ಮಹಾರಾಷ್ಟ್ರದೇಶದ ವಿಷಯವಾಗಿ ಹೇಳಲ್ಪಟ್ಟ ದೋಷಗಳು ಇಲ್ಲಿಯೂ ಕಾಣುವವು.

ವಿಶ್ವಾವಸು—ಗೆಳೆಯನೇ ಹೀಗೆ ನುಡಿಯಬೇಡ. ಈ ಆಂಧ್ರದೇಶದವರು ವೇದಗಳನ್ನೋದದಿದ್ದರೂ, ಯಜ್ಞಗಳನ್ನು ಮಾಡದಿದ್ದರೂ, ಆದಿತ್ಯಾದಿ ದೇವತೆಗಳಲ್ಲಿ ಭಕ್ತಿಸಂಪನ್ನರಾಗಿಯೂ, ಬ್ರಾಹ್ಮಣರ ಪೂಜೆಯಲ್ಲಾಸಕ್ತರಾಗಿಯೂ ಇರುವದರಿಂದ ದೋಷರಹಿತರಾಗಿರುವರು. ರೋಮಾವಳಿ

ಯೆಂಬ ಯಮುನಾನದಿಯಿಂದಲೂ, ಸುಂದರವಾದ ಹಾರ ವೆಂಬ ಗಂಗಾನದಿಯಿಂದಲೂ, ತುಂಗಸ್ತನಗಳೆಂಬ ಗಿರಿಗಳಿಂದಲೂ, ನಾಭಿಯೆಂಬ ವಾಪಿಯಿಂದಲೂ ಸಂಪತ್ತಿನಿಂದಲೂ, ಮೂರ್ತೀಭವಿಸಿದ ಭೂಮಿಯಂತಿರುವ ತರುಣಿಯರೊಡನೆ ಯುವಕರು ರಾಜರಂತೆ ವಿಹರಿಸುತ್ತಿರುವರು. ಕಿರಾತ ರಾಜನು ತನ್ನನ್ನಾಶ್ರಯಿಸಿರುವ ಪಂಡಿತರ ಧನವನ್ನಪಹರಿಸುವ ಸೇವಕರನ್ನೆಂತು ಕ್ಷಮಿಸುವನೋ ಹಾಗೆ ಕಲ್ಪವೃಕ್ಷವೂ ತನ್ನನ್ನಾಶ್ರಯಿಸಿರುವ ಪುಷ್ಪಗಳ ಮಕರಂದವನ್ನು ಬಲಾತ್ಕಾರದಿಂದ ಅಪಹರಿಸುವ ಭ್ರಮರಗಳನ್ನು ಅತಿ ಸಂತೋಷದಿಂದ ತಲೆಯಲ್ಲಿ ಧರಿಸುವುದು. ಆದ.ದರಿಂದ ಮಹಾವಿತರಣಶಾಲಿಯಾದ ಕಲ್ಪವೃಕ್ಷವೂ ಕೂಡ ಕಿರಾತ ರಾಜನಂತೆ ದೂಷಣೆಗೆ ಪಾತ್ರವಾಗಿರುವುದು. ಮಹಾದಾನ ಶೀಲನಾದ ಕರ್ಣನೂ ಅರ್ಜುನನ ಕೀರ್ತಿಗೆ ಹಾನಿಯಂ ಮಾಡುವುದರಲ್ಲುದ್ಯುಕ್ತನಾದುದರಿಂದ ಅವನೂ ನಿಂದನೀಯನೆ ಆಗಿರುವನು. ವರ್ಷಾಕಾಲದಮೇಘವೂ ಕೂಡ ತಾನೇ ಬಹಳ ಉದಾರಸ್ವಭಾವವುಳ್ಳದೆಂದು ಗರ್ಜಿಸುವದರಿಂದ ಅದೂ ಶ್ಲಾಘನೀಯವಲ್ಲ. ಆಂಧ್ರದೇಶದ ರಾಜರಾದರೋ ಅವಿಚ್ಛಿನ್ನವಾದ ಪೂರ್ವೋಕ್ತದೋಷರಹಿತವಾದ ದಾನವಂ ಮಾಡುವರು. ಸುತ್ತಲೂನೋಡಿ ವಿಶ್ವಾಸುವು ಮರಳಿಹೇಳಲಾರಂಭಿಸಿದನು—ಸ್ನೇಹಿತನೆ! ಗೋದಾವರೀನದಿಯನಿರ್ಮಲೋದಕದಲ್ಲಿ ಸ್ನಾನಮಾಡಿ ಸೈಕತಲಿಂಗಗಳಲ್ಲಿ ಈಶ್ವರನನ್ನು ಭಾವಿಸಿ ತಿಲಾಕ್ಷತಗಳಿಂದಲೂ ಅತಸೀಮಲ್ಲಿಕಾಚಂಪಕ, ಪುನ್ನಾಗಕೇತಕೀಕರವೀರ, ಕುಂದಕಲ್ಹಾರ, ಮಾಲತೀ

ಪತ್ರಪಾರಿಜಾತಗಿರಿಕರ್ಣಿಕಾಪುಷ್ಪಗಳಿಂದಲೂ, ಮಾಚೀಸೇವನ್ತಿಕಾಬಿಲ್ವದೇವದಾರುದಾಡಿಮೀಭೃಂಗಮರುವಕದೂರ್ವಿಕಾಪತ್ರಗಳಿಂದಲೂ, ಆಂಧ್ರದೇಶೀಯ ಬ್ರಾಹ್ಮಣರು ಶ್ರದ್ಧಾಭಕ್ತಿಸಮೇತರಾಗಿ ಶಂಕರಾರಾಧನೆಯಂ ಮಾಡುವರು. ರುದ್ರಾಕ್ಷಮಾಲಾಶೋಭಿತಕರದಿಂದಲೂ, ವೇದಮಂತ್ರೋಚ್ಚಾರಣೆಯಿಂದ ಪರಿಶುದ್ಧವಾದ ವಕ್ತ್ರದಿಂದಲೂ, ಇಂದ್ರಿಯನಿಗ್ರಹದಿಂದಲೂ ಪ್ರಕಾಶಮಾನರಾಗಿ ಶಿವಪೂಜಾಧುರಂಧರರಾಗಿರುವದರಿಂದ ಪಾಪರಹಿತರಾದ ಈ ವೈದಿಕಶಿಖಾಮಣಿಗಳಿಗೆ ನಮಸ್ಕಾರವೆಂದು ಹೇಳಿದನು. ಶಾಸ್ತ್ರಜ್ಞರಾದುದರಿಂದಲೇ ಪರಮಾತ್ಮನಲ್ಲಿ ಅಚಂಚಲಭಕ್ತಿಯುಳ್ಳ ಅನೇಕ ಬ್ರಾಹ್ಮಣರು ಗೋದಾವರೀತೀರದಲ್ಲಿ ಪ್ರತಿಯೊಂದು ವಸಂತಋತುವಿನಲ್ಲಿಯೂ ಯಜ್ಞಗಳನ್ನು ಮಾಡುತ್ತಾರೆ. ಆದಕಾರಣ ಇವರು ಅಧಿಕಾರವ್ಯಾಪಾರಗಳಲ್ಲಿ ನಿರತರಾಗಿದ್ದರೂ ನಿಷ್ಕಳಂಕರಾಗಿರುವರು. ರಾಜನನ್ನು ಆಶ್ರಯಿಸಬೇಕು, ದಾನಮಾಡಬೇಕು, ಬಹುಕೀರ್ತಿಯಂ ಪಡೆಯಬೇಕು ಎಂಬ ನಿಯಮವನ್ನು ಈ ಬ್ರಾಹ್ಮಣರು ತಪ್ಪದೆ ಆಚರಿಸುವರು.

ಕೃಶಾನು—ಎಲೈ, ಮಿತ್ರನೆ, ದೇವಬ್ರಾಹ್ಮಣರದ್ರೋಹದಲ್ಲಿ ನಿರತರಾದ ಯವನರು ಆಂಧ್ರದೇಶದಲ್ಲಿ ಪ್ರಚುರರಾಗಿ ತಿರುಗುವರು ನೋಡು. ವೇಗದಲ್ಲಿ ವಾಯುವನ್ನು ಮೀರಿಸಿದ ಕುದುರೆಗಳಿಂದ ಶೋಭಿಸುವವರಾಗಿ, ಹರಿಹರದೇವಾಲಯಧ್ವಂಸಕರಾಗಿ, ವರ್ಣಾಶ್ರಮಧರ್ಮಾಚರಣೆಗೆ ಕಂಟಕರಾಗಿ, ಲೋಕಕ್ಕೆ ಭಯಂಕರರಾಗಿರುವ ಮ್ಲೇಚ್ಛರೂ ಯವನರೂ ಆಂಧ್ರದೇಶದಲ್ಲಿ ಎಲ್ಲೆಲ್ಲಿಯೂ ಹರಡಿಕೊಂಡಿರುವರು.

ವಿಶ್ವಾವಸು—ಕೃಶಾನುವೇ! ನೀನು ಹೇಳಿದುದು ಸತ್ಯವು. ಆದರೂ ಈ ತುರುಷ್ಕಯವನರ ಅಸನ್ಯಸಾಧಾರಣವಾದ ಪರಾಕ್ರಮವನ್ನು ನೋಡು. ಶತ್ರುರಾಜರ ಸೈನ್ಯಗಳು ತಂಡೋಪತಂಡಗಳಾಗಿ ಬಂದರೂ ಈ ತುರುಷ್ಕಯವನರಲ್ಲಿ ಒಬ್ಬನು ಕುದುರೆಯನ್ನೇರಿ ಹಸ್ತದಲ್ಲಿ ಖಡ್ಗವನ್ನು ಝಳಪಿಸುತ್ತಾ ಯುದ್ಧರಂಗಕ್ಕೆ ಬಂದರೆ ಆ ಶತ್ರುಸೈನಿಕರು ದೀನರಾಗಿ ಅನಾಥರಾಗಿ ತೃಣವನ್ನು ತಿನ್ನುವರು. ಈ ತುರುಷ್ಕಯವನರು ಮದ್ಯಪಾನಮಾಡಿದರೂ, ಅನ್ಯದೇಶಗಳನ್ನು ಧ್ವಂಸಮಾಡಿದರೂ, ಪರಸ್ತ್ರೀಯರನ್ನು ಅಪಹರಿಸಿದರೂ, ವೇದಗಳನ್ನೂ ವೇದವಿಹಿತಕರ್ಮಗಳನ್ನೂ ದೂಷಿಸಿದರೂ, ಯುದ್ಧರಂಗದಲ್ಲಿ ಧೀರರಾಗಿ ದೇಹವನ್ನು ತೃಣದಂತೆ ತ್ಯಜಿಸುವದರಿಂದ ಸ್ವರ್ಗವನ್ನೈದುವರು ; ಎಂದು ಆಂಧ್ರದೇಶೀಯಭಟರ ಪರಾಕ್ರಮವನ್ನು ವರ್ಣಿಸುತ್ತಾ ಮುಂದಕ್ಕೆ ತೆರಳಿ ಕರ್ಣಾಟಕದೇಶವನ್ನು ಹೊಕ್ಕು ವಿಶ್ವಾವಸುವು ಕೃಶಾನುವಿಗೆ ಹೇಳಿದನದೆಂತೆಂದರೆ—ಎಲೈ, ಮಿತ್ರನೆ! ಸಕಲಲೋಕವಿಶ್ರುತವಾದ, ಸರ್ವಜನನೇತ್ರಾನಂದಕರವಾದ, ಈ ಕರ್ಣಾಟಕದೇಶವನ್ನು ನೋಡು. ಈ ದೇಶದಲ್ಲಿ ಪ್ರತಿನಗರದಲ್ಲಿಯೂ ದಿವ್ಯವಾದ ಉದ್ಯಾನಗಳೂ, ಪ್ರತಿಒಂದು ಉಪವನದಲ್ಲಿಯೂ ಫಲಪುಷ್ಪಗಳಿಂದ ನಿಬಿಡವಾದ ವೃಕ್ಷಗಳೂ, ಪ್ರತಿಪುಷ್ಪದಲ್ಲಿಯೂ ಮಕರಂದಬಿಂದುಗಳೂ ಕಣ್ಗೊಳಿಸುತ್ತಿರುವುವು. ಪ್ರತಿಯೊಂದು ಮಕರಂದಬಿಂದುವಿನಲ್ಲಿಯೂ ಭ್ರಮರಗಳು ಝುಂಕಾರರವದೊಡನೆ ಭ್ರಮಿಸುತ್ತಿರುವವು. ಪ್ರತಿಒಂದು ಝುಂಕಾರರವವೂ ಮೃಗಾಕ್ಷಿಯರಿಗೆ ಮಹಾವಿಲಾಸಗಳ

ನ್ನುಂಟುಮಾಡುವುದು. ಆ ಮೃಗಾಕ್ಷಿಯರ ಪ್ರತಿಬಿಂದು ವಿಲಾಸವೂ ಅವರ ಮನ್ಮಥೋದ್ರೇಕವಂ ವ್ಯಂಜಿಸುತ್ತಿರುವುದು.

ಕೃಶಾನು—ನಿಂದನೀಯವಾದ ಈ ದೇಶವನ್ನು ಹೊಗಳುವದುಚಿತವಲ್ಲ. ವೇದವೈದಿಕರಿಗೆ ಶತ್ರುಗಳಾಗಿಯೂ, ಭಸ್ಮೋದ್ಧೂಳಿತಶರೀರರಾಗಿಯೂ, ಶ್ರೌತಸ್ಮಾರ್ತದೂರರಾಗಿಯೂ, ಭ್ರಷ್ಟಚಾರಿತ್ರರಾಗಿಯೂ ಲಿಂಗಬಲಿಜರೆಂದು ಪ್ರಸಿದ್ಧರಾದ ಪಾಷಂಡರು ಈ ಕರ್ಣಾಟಕದೇಶದಲ್ಲಿ ಪ್ರಬಲರಾಗಿರುವರು. ಇವರ ಕೆಟ್ಟನಡತೆಯನ್ನು ಸಾವಧಾನವಾಗಿ ಕೇಳು. ತ್ರಿಪುರಾಸುರಮರ್ದನನಾದ ಈಶ್ವರನ ತಲೆಯು ಚಂದ್ರನ ಸುಧಾಮಯವಾದ ಕಿರಣಗಳಿಂದ ಶೀತವಾಗಿರುವದೆಂಬ ಅಸೂಯೆಯಿಂದ ಈ ದ್ವಿಜೇತರರು ಶಿವಪ್ರತಿಮೆಗೆ ತಮ್ಮ ಪಾದಜಲದಿಂದ ಅಭಿಷೇಕಮಾಡುವರು. ಕಷ್ಟವು!

ವಿಶ್ವಾವಸು.—ಹೀಗೆ ನುಡಿಯಬೇಡ. ಏತಕ್ಕೆಂದರೆ,- ಈ ದೇಶದಲ್ಲಿ ಮೇಲುಕೋಟೆ ಮುಂತಾದ ದಿವ್ಯಕ್ಷೇತ್ರಗಳಿರುವವು. ಈ ಯದುಗಿರಿಯು ಭಗವತ್ಕೈಂಕರ್ಯವನ್ನು ಮಾಡುವ ಜನಗಳ ದುರ್ನಿವಾರವಾದ ಪಾಪರಾಶಿಯನ್ನು ನಾಶಮಾಡುವದಲ್ಲದೆ ಶುದ್ಧಚಿತ್ತರಾದ ಮುನಿಶ್ರೇಷ್ಠರಿಂದ ಸೇವಿಸಲ್ಪಟ್ಟು, ಅನವರತವೂ ಆನಂದಧಾರೆಯನ್ನು ಸುರಿಸುತ್ತಿರುವ, ನೀಲಮೇಘಸುಂದರನಾದ, ನಾರಾಯಣನಿಂದ ಶೋಭಿಸುತ್ತಿರುವುದು. ಯದುಶೈಲಶಿಖರನಿಕೇತನನಾಗಿಯೂ,ಸುರಪತಿಮೌಳಿವಿರಾಜಮಾನಮರಕತಮಣಿಪ್ರಭಾನೀರಾಜಿತನಾಗಿಯೂ, ಅಪಾರಕರುಣಾರಸಸಾಗರನಾಗಿಯೂ, ನವಮೇಘಶ್ಯಾಮನಾಗಿಯೂ ಇರುವ ಪರಾತ್ಪರನಾದ ಶ್ರೀಮನ್ನಾರಾಯ

ಣನು ಇಲ್ಲಿ ಸರ್ವೋತ್ಕರ್ಷದಿಂದೊಪ್ಪುತ್ತಿರುವನು. ಯಾವ ನಾರಾಯಣನು ಕೃಷ್ಣಾವತಾರದಲ್ಲಿ ಉಗ್ರಸೇನನೆಂಬ ಯಾದವಪತಿಯನ್ನು ಪೂಜಿಸಿದನೋ ಆ ಸರ್ವಾಂತರ್ಯಾಮಿಯಾದ ಭಗವಂತನೀಗ ಯದುಶೈಲವನ್ನಲಂಕರಿಸುತ್ತಿರುವನು. ಶ್ವೇತದ್ವೀಪದಿಂದ ಗರುತ್ಮಂತನು ತಂದ ತಿರ.ಮಣಿಯನ್ನು ಲಲಾಟದಲ್ಲಿ ಧರಿಸುವ ಈ ಕ್ಷೇತ್ರದ ಮಹಾತ್ಮರು ಮನೋಮಲರಹಿತರಾಗಿರುವರು. ಯದುಗಿರಿಯಲ್ಲಿರುವ ಸರೋವರವು ಗಂಗಾನದಿಯ ಸಂಬಂಧದಿಂದ ಪಾವನವಾಗಿ, ಸರ್ವಜನರ ಪಾಪಪರಿಹಾರಿಣಿಯಾಗಿದೆ ಎಂದುಹೇಳಿ ವಿಶ್ವಾವಸುವು ವಿಮಾನವನ್ನು ಮುಂದಕ್ಕೆ ತಿರುಗಿಸಿ, ಕೃಶಾನುವಿಗೆ ಹೇಳಿದನದೇನೆಂದರೆ.—“ ಕೈವಲ್ಯಕಾಮರಾದ ಅನೇಕ ಬ್ರಾಹ್ಮಣೋತ್ತಮರಿಂದ ಸೇವಿತನಾದ, ಲೋಕವಿಖ್ಯಾತನಾದ, ಆನಂದತೀರ್ಥನೆಂಬ ಮುನಿವರನಿಂದಲಂಕೃತವಾದ, ಸ್ವರ್ಣದಂತೆ ಪ್ರಕಾಶಿಸುತ್ತಿರುವ ರಜತಪೀಠಪುರವನ್ನು (ಸುಮನೂರು ಎಂಬ ಗ್ರಾಮವನ್ನು) ನೋಡು ”

ಕೃಶಾನು.—ಎಲೈ ಮಿತ್ರನೇ! ನೀನು ಹೇಳಿದುದು ಸತ್ಯವೇ ಅಹುದು. ಆದರೂ ಆನಂದತೀರ್ಥನೆಂಬ ಮುನೀಂದ್ರನ ಶಾಸ್ತ್ರವನ್ನು ಅನುಸರಿಸುವ ಜನಗಳ ದುರಾಚಾರಗಳನ್ನು ವರ್ಣಿಸುವೆನು. ಸಾವಧಾನವಾಗಿ ಕೇಳು. ಮಧ್ವಮತಾವಲಂಬಿಗಳಾದ ಈ ಜನರು ಪ್ರತಿದಿನವೂ ಪ್ರಾತಃಕಾಲದಲ್ಲಿ ಸಂಧ್ಯಾವಂದನೆಯಂ ಮಾಡದೆ ಶಾಸ್ತ್ರಾಭ್ಯಾಸವನ್ನುಮಾಡಿ ಸೂರ್ಯನು ಅಸ್ತಂಗತನಾದ ಮೇಲೆ ಪ್ರಾತಃಕಾಲೋಚಿತ ಸಂಧ್ಯಾವಂದನೆಯಂ ಮಾಡುವರು. ಹಾಗಾದರೂ ಇತರ

ಮತಗಳನ್ನು ಅನುಸರಿಸುವ, ಕರ್ಮಠರಾದ ಬ್ರಾಹ್ಮಣಶ್ರೇಷ್ಠರನ್ನು ನೋಡಿದಾಗ್ಯೂ ಅವರನ್ನು ಸನ್ಮಾನಿಸುವದಿಲ್ಲ. ವೇದವಿಹಿತವಾದ ನಿತ್ಯಕರ್ಮವನ್ನು ಬಿಟ್ಟು, ಪರಲೋಕಭೀತಿಯಿಲ್ಲದೆ ಹೆಮ್ಮೆಯಿಂದ ಸಂಚರಿಸುವ ಈ ಮಾಧ್ವರು ಶ್ಲಾಘನೀಯರೆ ? ಇಂತಹ ಆಚಾರಭ್ರಷ್ಟರಾದ ಮಾಧ್ವರ ಗುರುವೂ ಕೂಡ ಯಥಾರ್ಥವಾಗಿ ವಿರಕ್ತನಲ್ಲದಿದ್ದರೂ, ಗಾಯತ್ರಿಯನ್ನು ಬಿಟ್ಟು, ಶಿಖಾಯಜ್ಞೋಪವೀತಗಳನ್ನು ತ್ಯಜಿಸಿ, ತುರೀಯಾಶ್ರಮದಲ್ಲಿರುವ ಯತಿವರ್ಯನಂತೆ ನಟಿಸುತ್ತಾ ದ್ರವ್ಯಾರ್ಜನೆಗೋಸುಗವಾಹನಾರೂಢನಾಗಿ, ನಿರ್ಭಯನಾಗಿಯೂ ಸಂಚರಿಸುವನು. ವಾಹನಾರೂಢನಾದ ಯತಿಯನ್ನು ನೋಡಿದರೆ ಸಚೇಲಸ್ನಾನವನ್ನು ಮಾಡಬೇಕೆಂದು ಆ ಯತಿಯ ಅನ್ನವನ್ನು ತಿಂದರೆ ಚಾಂದ್ರಾಯಣವ್ರತವನ್ನಾಚರಿಸಬೇಕೆಂದು ಪ್ರಾಜ್ಞರು ನುಡಿಯುವರು. ಆದಾಗ್ಯೂ ಮಧ್ವಮತಾನುಸಾರಿಗಳಾದ ಪಂಡಿತರಾದರೋ ಅಂತಹ ಯತಿಯನ್ನು ನೋಡಿದರೆ ಕೈವಲ್ಯಸಿದ್ಧಿಯಾಗುವದೆಂದು ಆ ಯತಿಯ ಅನ್ನವನ್ನು ತಿಂದರೆ ಸಕಲಪಾಪಗಳೂ ಪರಿಹೃತಗಳಾಗುವವೆಂಬ ನಚ್ಚಿಕೆಯಿಂದಲೂ ಭ್ರಾಂತಚಿತ್ತರಾಗಿರುವರು. ಮಾಧ್ವಗೃಹಸ್ಥರು ಉದರಭರಣೆಗೋಸ್ಕರ ಪಾದಚಾರರಾಗಿ ಭಿಕ್ಷಾಟನೆಯಂ ಮಾಡಿ ಖಿನ್ನರಾಗಿ, ಜೀರ್ಣವಸ್ತ್ರಗಳನ್ನುಟ್ಟು ಶಿಥಿಲವಾದ ಮನೆಗಳಲ್ಲಿ ವಾಸಮಾಡುವರು. ಯತಿಗಳಾದರೋ ದಿವ್ಯವಾದ ನಾರುಬಟ್ಟೆಗಳನ್ನುಟ್ಟು, ದೃಢವಾದ ಶಿಲಾಗೃಹಗಳಲ್ಲಿ ವಾಸಮಾಡುವರು. ಈ ಮಾಧ್ವರು ವೇದವನ್ನು ತಿರಸ್ಕರಿಸಿ ಶಾಸ್ತ್ರವನ್ನು ಪುರಸ್ಕರಿಸುವರು. ಪ್ರಭುಸೇವೆ

ಯನ್ನುಪೇಕ್ಷಿಸಿ ಆ ಪ್ರಭುಗಳ ಸೇವಕರನ್ನಾಶ್ರಯಿಸುವ ರು. ಏಕಾದಶೀದಿವಸದಲ್ಲಿ ಸ್ನಾನಸಂಧ್ಯಾಹ್ನಿಕಾರ್ಚನಾತ್ರಯವ್ಯ ತಿರಿಕ್ತವಾದ ಕರ್ಮವನ್ನು ತ್ಯಜಿಸಬೇಕೆಂಬ ನಿಯಮದಿಂದ ಅಗ್ನಿಹೋತ್ರವನ್ನು ಬಿಡುವರು. ಹೀಗೆ ಮಾಡುವದರಿಂದ ಅಗ್ನಿಯು ಪ್ರಾಕೃತವಾಗುವುದು. ಈ ಪ್ರಾಕೃತಾಗ್ನಿಯಲ್ಲಿ ವ್ಯರ್ಥವಾಗಿ ಪಶುವಧೆಯನ್ನು ಮಾಡಿ ಯಜ್ಞವನ್ನು ಆಚರಿ ಸಿದರೆ ಫಲವಿಲ್ಲವೆಂದೆಣಿಸಿ ಪಿಷ್ಟಪಶುವನ್ನು ಅಂಗೀಕರಿಸು ವುದು ಉತ್ಕೃಷ್ಟವೆಂದು ಭಾವಿಸುವರು.

ವಿಶ್ವಾವಸು.—ಮಿತ್ರನೇ! ಪರಮಾತ್ಮನಾದ ಶ್ರೀಕೃ ಷ್ಣನ ಧ್ಯಾನದಿಂದ ಪರಿಶುದ್ಧರಾದ ಮಾಧ್ವರನ್ನು ಏತಕ್ಕೆ ದೂಷಿಸುವೆ? ಹರಿದಿನದಲ್ಲಿ ಶುದ್ಧೋಪವಾಸವ್ರತವನ್ನು ಬಾಲರೂ ವೃದ್ಧರೂ ಅನುಷ್ಠಿಸುವರು. ನಿರ್ವಿಘ್ನವಾಗಿ ನಾರಾಯಣನನ್ನು ಆರಾಧಿಸುವರು. ಭಾಗವತರನ್ನು ಅಧಿಕ ಭಕ್ತಿಯಿಂದಲೂ ಪರಮಶ್ರದ್ಧೆಯಿಂದಲೂ ನೋಡುವರು. ತಮ್ಮ ಗುರುಗಳಿಂದ ಹೇಳಲ್ಪಟ್ಟ ಶಾಸ್ತ್ರವನ್ನು ಶ್ರದ್ಧೆಯೊಡನೆ ಪಠಿಸುವರು. ಆದುದರಿಂದ ಮಾಧ್ವರು ಸುಚರಿತಶೋಭಿತರ ಲ್ಲವೆ? ಹೇಳು! ಶ್ರೀಕೃಷ್ಣನಿಗೆ ಅಭಿಷೇಕಮಾಡುವದರಲ್ಲೂ, ಭಾಗವತಾದಿ ವಿಷ್ಣುಪುರಾಣಗಳನ್ನು ಪಠಿಸುವದರಲ್ಲೂ, ಗಂ ಗಾದಿಪುಣ್ಯತೀರ್ಥಗಳಲ್ಲಿ ಸ್ನಾನಮಾಡುವದರಲ್ಲೂ, ಮಾಧ್ವಗು ರುಗಳು ಸಂಸಾರವಾರ್ತಾಶೂನ್ಯರಾಗಿ, ಬ್ರಹ್ಮವಿದ್ಯಾವಿಚಾ ರಪರರಾಗಿ, ಯಾವಜ್ಜೀವವೂ ಕಾಲವನ್ನು ಒಂದುಕ್ಷಣದಂತೆ ಕಳೆಯುವರು. ವೃದ್ಧರಾದುದರಿಂದ ಪಾದಚಾರರಾಗಿ ಹೋಗ ಲು ಅಶಕ್ತರಾದ ಈ ಮಾಧ್ವಗುರುಗಳು ಶಿಷ್ಯರನ್ನು ಸಂರಕ್ಷಿ

ಸಲು ದೂರದೇಶಗಳಿಗೆ ಪಲ್ಲಕ್ಕಿಗಳಲ್ಲಿ ಕುಳಿತು ಹೋದರೆ ಹಾನಿಯೇನು ? ಆಸ್ತಿಕಶಿಖಾಮಣಿಗಳಿಂದ ಕೊಡಲ್ಪಟ್ಟ ವಿತ್ತ ವನ್ನು ಶ್ರೀನಾರಾಯಣನಿಗೆ ಸಮರ್ಪಿಸಿ ಬಂದು ಕಾಸನ್ನೂ ಮುಟ್ಟದೇ ಇರುವ ಗುರುಗಳನ್ನು ದೂಷಿಸಬಹುದೆ? ಹಾಗೆ ಮಾಡುವದರಿಂದ ಅವರ ನಿಸ್ಪೃಹತ್ವಕ್ಕೇನಾದರೂ ಲೋಪ ವುಂಟಾಗುವುದೆ ? ಭಗವಂತನಿಗೆ ನಿವೇದಿತವಾದ ಅನ್ನವನ್ನು ತಿಂದರೆ ಯತ್ಯನ್ನವನ್ನು ತಿಂದಹಾಗಾಗುವುದೆ ? ಕೆಲವರು ಮಾಧ್ವರು ಆಲಸ್ಯದ ದೆಸೆಯಿಂದ ಎಂದಾದರೂ ಬಂದುದಿನ ಸಂಧ್ಯಾವಂದನೆಯನ್ನು ಸರಿಯಾದ ಕಾಲದಲ್ಲಿ ಮಾಡದಿದ್ದರೆ ದೋಷವೇನು ? 'ಅವಶ್ಯಂಪಿತುರಾಚಾರಃ' ಎಂದು ಸ್ಮೃತಿ ವಚನವಿರುವದರಿಂದ, ಸ್ಮೃತಿಸಾರಜ್ಞರು ಪಿತೃಪಿತಾಮಹ ಪ್ರಪಿತಾಮಹಾದಿವೃದ್ಧರ ಮಾರ್ಗವನ್ನನುಸರಿಸುವ ಜನರ ನ್ನೆಂದಿಗೂ ದೂಷಿಸುವದಿಲ್ಲ. ಆದುದರಿಂದ ಸದಾಚಾರಭೂ ಷಿತರಾದ ಮಾಧ್ವರನ್ನು ದೂಷಿಸುವುದು ನಿನ್ನಂತಹ ಮತ್ತರಿ ಗೆ ಅಭಿಮತವೇ ಹೊರತು ಗುಣಗ್ರಾಹಿಗಳಿಗೆಂದಿಗೂ ಅಭಿಮ ತವಾಗಲಾರದು ; ಎಂದು ನುಡಿದು ವಿಮಾನದಲ್ಲಿ ಮುಂದಕ್ಕೆ ಪ್ರಯಾಣಮಾಡಿ ಎಲ್ಲಾ ದಿಕ್ಕುಗಳಲ್ಲೂ ನೋಡಿ ವಿಶ್ವಾವಸು ವು ಕೃಶಾನುವಿಗೆ ಮರಳಿ ಪೇಳಿದನದೆಂತೆಂದರೆ.—ಭಿನ್ನಭಿನ್ನ ವಾದ ಉಡುಪುಗಳನ್ನುಟ್ಟು, ಭಿನ್ನಭಿನ್ನವಾದ ಭಾಷೆಗಳನ್ನು ಮಾತಾಡುವ, ಭಿನ್ನಭಿನ್ನವಾದ ಆಚಾರಗಳನ್ನನುಸರಿಸಿ, ವಿಧವಿ ಧವಾದ ಆಭರಣಗಳಿಂದಲಂಕೃತರಾದ ಈ ಪುರುಷರನ್ನೂ ನಾರಿಯರನ್ನೂ ನೋಡು.

ಕೃಶಾನು.—ಶಬನೆ! 'ನೋಡು' ಎಂದು ಹೇಳಬೇಡ ಕೋತಿಗಳಿಗೆ ಸಮಾನರಾದ ಜನಗಳಿರುವ ಈ ದೇಶವನ್ನು ಬಿಟ್ಟು ಮುಂದೆ ನಡೆ; ಬೆಳದಿಂಗಳಿಗೂ ಕಗ್ಗತ್ತಲೆಗೂ, ಕೇಸರ ವೃಕ್ಷಕ್ಕೂ ವಿಷವೃಕ್ಷಕ್ಕೂ, ಸರ್ಪರಾಜನಾದ ಆದಿಶೇಷನಿಗೂ ತುಚ್ಛವಾದ ನೀರಿನ ಹಾವಿಗೂ, ತಾವರೆಗೂ ಉನ್ಮತ್ತಪುಷ್ಪಕ್ಕೂ, ಇಂಪಾಗಿ ಹಾಡುತ್ತಿರುವ ಕೋಗಿಲೆಗೂ ಕಾಗಿಗೂ, ಕ್ಷೀರಸಮುದ್ರಕ್ಕೂ ಕ್ಷುದ್ರಕೂಪಕ್ಕೂ, ಪಂಡಿತನಿಗೂ ಮೂರ್ಖನಿಗೂ ಭೇದವನ್ನರಿಯದ ಈಪಾತ್ರರು ದರ್ಶನಾರ್ಹರಲ್ಲ.

ವಿಶ್ವಾವಸು.—ಹೇಮಶಿಖರವಿರಾಜಮಾನದೇವಸ್ಥಾನಗಳಿಂದಲೂ, ವೇದಶಾಸ್ತ್ರಪುರಾಣವಿದ್ಯಾಪ್ರಸಂಗವಿವೇಕಿಗಳಾದ ವಿಪ್ರೋತ್ತಮರಿಂದಲೂ, ಸತ್ಯಪರಾಕ್ರಮಾದಿಗಳಿಂ ಪ್ರಸಿದ್ಧರಾದ ಕ್ಷತ್ರಿಯರಿಂದಲೂ, ಐಶ್ವರ್ಯದಲ್ಲಿ ಕುಬೇರನನ್ನು ಮೀರಿಸಿದ ವೈಶ್ಯರಿಂದಲೂ, ಬ್ರಾಹ್ಮಣಪಾದಪದ್ಮಸೇವಾಧುರಂಧರರಾದ ಶೂದ್ರರಿಂದಲೂ, ಸಿಂಹ, ಶರಭ, ಶಾರ್ದೂಲ, ವರಾಹ, ಭಲ್ಲೂಕಾದಿಮೃಗಸಮೂಹಗಳಿಂದಲೂ, ಶುಕಪಿಕಮಯೂರಮರಾಳಸಂಘಗಳಿಂದಲೂ, ವಕುಳಕ್ರಮುಕಕದಳೀನಾರಂಗಕಿಂಶುಕಾದಿವೃಕ್ಷಗಳಿಂದಲೂ, ಉದ್ಯಾನವನಗಳಿಂದಲೂ, ತುಲಸೀವನಗಳಿಂದಲೂ, ಕಣ್ಗೊಳಿಸುತ್ತಿರುವ ಶೇಷಾಚಲವೆಂಬೀ ಮಹಾಕ್ಷೇತ್ರವನ್ನು ನೋಡು. ಆಶ್ರಿತರಕ್ಷಕನಾದ ರಮಾಪತಿಯು ಕ್ರೀಡೆಗಳಿಗೆ ಅನುಕೂಲವಾಗಿ, ಸಂಸಾರಮೂಲವಾದ ಅಜ್ಞಾನವನ್ನು ಧ್ವಂಸಮಾಡುವ ಈ ಶೇಷಶೈಲಕ್ಕೆ ದೂರದೇಶಗಳಿಂದ ಬರುವ ಮುನಿವರರು ಸರ್ಪ, ವೃಕ್ಷ, ಪಕ್ಷಿ, ವ್ಯಾಘ್ರ, ಹರಿಣ, ಪಾಷಾಣ, ಲತಾ, ಗುಹಾ,

ನಿರ್ಝರಗಳಲ್ಲಾದರೂ ಜನ್ಮವನ್ನು ಬಯಸುವರು. ವೈಕುಂಠವಾಸಿಯಾದ ಸಾಕ್ಷಾನ್ಮಹಾವಿಷ್ಣುವು ಯದುಶೈಲದಲ್ಲಿ 'ಅಲಮೇಲ್ಮಂಗಾ' ಎಂದು ಪ್ರಸಿದ್ಧಳಾದ ಲಕ್ಷ್ಮೀದೇವಿಯೊಡನೆ ಪ್ರಕಾಶಿಸುತ್ತಿರುವನು. ಸಕಲಶಾಸ್ತ್ರಸಾರಭೂತನಾಗಿಯೂ, ಲೋಕೈಕರಕ್ಷಕನಾಗಿಯೂ, ವೃಷಭಗಿರಿಯಲ್ಲಿ ವಿಹರಿಸುವವನಾಗಿಯೂ, ವಕ್ಷಸ್ಥಲದಲ್ಲಿ ಭಾರ್ಯೆಯಾದ ಲಕ್ಷ್ಮಿಯನ್ನುಳ್ಳವನಾಗಿಯೂ, ತನ್ನ ಭಕ್ತರಿಗೆ ಅತಿಸಮೀಪದಲ್ಲಿರುವವನಾಗಿಯೂ, ನಿರ್ವಿಕಾರನಾಗಿಯೂ, ಉದಾರಸ್ವಭಾವನಾಗಿಯೂ ಇರುವ ವಿರಾಟ್ಪುರುಷನನ್ನು ಅನವರತವೂ ಭಜಿಸೋಣ.

ಕೃಶಾನು.—ನಿನ್ನ ಮನಸ್ಸು ಈ ಭಗವಂತನಲ್ಲಿಯೇ ಲೀನವಾಗಿದೆ. ವಿಷಯಾಂತರಪ್ರಸಂಗವೇ ಇಲ್ಲ. ಆಶ್ಚರ್ಯ!

ವಿಶ್ವಾವಸು.—ಸಖನೆ! ನೀನು ಹೇಳಿದುದು ಸಿದ್ಧವು. ಸತ್ಪುರುಷರಿಗೆ ಬ್ರಹ್ಮಾನಂದವನ್ನುಂಟುಮಾಡುತ್ತಾ ಬಹುಕಾಲದಿಂದಲೂ ಶೇಷಾದ್ರಿಯನ್ನಲಂಕರಿಸುತ್ತಿರುವ ಈ ಶ್ರೀನಿವಾಸನು ಬ್ರಹ್ಮಜ್ಞಾನಿಗಳ ಚಿತ್ತವೆಂಬ ಉದ್ಯಾನದಲ್ಲಿ ವಿಹರಿಸುತ್ತಿರುವನು.

ಕೃಶಾನು—ಕೇವಲವಾಗಿ ಅರ್ಥಪರನಾದ ಈ ದೇವರನ್ನು ಏತಕ್ಕೆ ಧ್ಯಾನಿಸುವೆ? ಇಷ್ಟಾಪತ್ತಿಗಾಗಲಿ ಅನಿಷ್ಟನಿವೃತ್ತಿಗಾಗಲಿ ಈ ದೇವರನ್ನು ಪ್ರಾರ್ಥಿಸುವಜನರು ತಮ್ಮ ಇಷ್ಟಾರ್ಥಸಿದ್ಧಿಯಾದ ಮೇಲೆ ದೇವರಿಗೆ ಕಾಣಿಕೆಯನ್ನು ಸಮರ್ಪಿಸುವೆನೆಂದು ಪ್ರತಿಜ್ಞೆಮಾಡಿ ಹಾಗೆ ನಡೆಯದಿದ್ದರೆ ಈ ಶ್ರೀನಿವಾಸನು ಅವರ ಅಪರಾಧಕ್ಕೋಸ್ಕರ ಅವರನ್ನು

ಭಯಪಡಿಸಿ ಬಡ್ಡಿಯೊಡನೆ ಪ್ರತಿಜ್ಞಾತವಾದ ಕಾಣಿಕೆಯು ಮೊತ್ತವನ್ನು ಅವರಿಂದ ವಸೂಲು ಮಾಡುವನು. ಈ ವೆಂಕಟಾದ್ರಿವನಪ್ರದೇಶದಲ್ಲಿ ವಿಹರಿಸುತ್ತಿದ್ದ ಶ್ರೀನಿವಾಸನು ಬಾಯಾರಿಕೆಯಿಂದ ಪೀಡಿತನಾಗಿ ಒಬ್ಬಾನೊಬ್ಬ ಪುರುಷನನ್ನು ಬಂದು ತೊಟ್ಟುನೀರನ್ನು ಬೇಡಿದನು. ಈ ಶೇಷಾದ್ರಿಯಲ್ಲಿ ತಟಾಕವನ್ನಗೆಯುತ್ತಿದ್ದ ಒಬ್ಬ ಮನುಷ್ಯನ ದೊಡ್ಡ ಮಣ್ಣಿನರಾಶಿಯನ್ನು ಹೊತ್ತನು. ಅಜ್ಞಾತಕುಲಗೋತ್ರನಾದ ಒಬ್ಬ ಮನುಷ್ಯನು ಕೊಟ್ಟ ಮೃಣ್ಮಯವಾದ ಪುಷ್ಪಮಾಲಿಕೆಯನ್ನು ತನ್ನ ಮಣಿಮಯಕಿರೀಟದಲ್ಲಿ ಧರಿಸಿದನು; ಆದಾಗ್ಯೂ ಈ ವೆಂಕಟೇಶಸ್ವಾಮಿಯನ್ನು ಶ್ರುತಿಜ್ಞರು ಜಗನ್ನಾಥನೆಂದು ಹೊಗಳುವರು.

ವಿಶ್ವಾವಸು—ಎಲೈ ಮಿತ್ರನೆ! ಇದೇನಾಶ್ಚರ್ಯ! ಕರುಣಾಸಿಂಧುವಾದ ವೆಂಕಟೇಶ್ವರನಲ್ಲಿಯೂ ಗುಣಗಳನ್ನು ದೋಷಗಳನ್ನಾಗಿ ಎಣಿಸುತ್ತೀಯೆ ಸಮಸ್ತಪ್ರಾಣಿಗಳಲ್ಲಿ ಅಂತರ್ಯಾಮಿಯಾಗಿ ಉತ್ಪತ್ತಿ, ಪಾಲನ, ಲಯ, ಎಂಬ ತ್ರಿವಿಧಕರ್ಮಗಳಿಂದ ಕ್ರೀಡಿಸುತ್ತಿರುವ ಸರ್ವೋತ್ತಮನಾದ ಕೃಪಾಸಮುದ್ರನಾದ ವೆಂಕಟಪತಿಯು ತನ್ನನ್ನು ಹೊಂದಲು ಭಕ್ತರಿಗೆ ಪರಮಸುಲಭನೆಂಬುದನ್ನು ಪ್ರಕಟಿಸಲು ನಾನಾವಿಧವಾದ ಮನುಜಲೀಲೆಗಳನ್ನು ಮಾಡುತ್ತಾನೆ. ಯುಗಾಂತರದಲ್ಲಿ ಅಂಜನಾದ್ರಿಯೆಂದು ಪ್ರಸಿದ್ಧವಾದ ಈ ಶೇಷಾದ್ರಿಯ ಅಧಿಪತಿಯಾದ ಶ್ರೀನಿವಾಸಸ್ವಾಮಿಯು ಜನಗಳಿಂದ ಅಸಾರವಾದ ಸ್ವಲ್ಪವಸ್ತುವನ್ನು ಪರಿಗ್ರಹಿಸಿ ಅವರ ಮನೋರಥಗಳನ್ನೆಲ್ಲಾ ಕೊಡುವನು. ಕೃಷ್ಣಾವತಾರದಲ್ಲಿ ಸ್ವಾಮಿ

ಯು ಭಕ್ತನೂ ಮಿತ್ರನೂ ಆದ ಕುಚೇಲನಿಗೆ ಸಕಲಸಂಪತ್ತುಗಳನ್ನು ಕೊಟ್ಟರೀತಿಯನ್ನು ಈ ವೆಂಕಟೇಶನು ಶೇಷಾದ್ರಿಯಲ್ಲಿ ಪ್ರಕಟಿಸುತ್ತಿರುವನು. ವೆಂಕಟೇಶಸ್ವಾಮಿಗೆ ಲಕ್ಷ್ಮೀದೇವಿಯೇ ಭಾರ್ಯೆಯಾಗಿಯೂ, ಸಹಸ್ರಕಿರಣನಾದ ಸೂರ್ಯನೇ ವಾಸಸ್ಥಾನವಾಗಿಯೂ, ಚಂದ್ರನು ಭಾವಮೈದನಾಗಿಯೂ, ರತ್ನಾಕರನು ಮಾವನಾಗಿಯೂ ಇದ್ದಾಗ್ಯೂ ಸಮೃದ್ಧನಾದ ಸ್ವಾಮಿಯು ತನ್ನನ್ನು ಭಜಿಸುವ ಜನರಿಗೆ ಮಹತ್ತರವಾದ ಅನುಗ್ರಹವನ್ನು ಮಾಡಲು "ಯಸ್ಯಾನುಗ್ರಹಮಿಚ್ಛಾಮಿತಸ್ಯ ವಿತ್ತಂಹರಾಮ್ಯಹಂ" ಎಂಬ ಆಗಮಾನುಸಾರವಾಗಿ ಆ ಭಕ್ತರ ದ್ರವ್ಯವನ್ನಪಹರಿಸುತ್ತಾನೆ. ಜಗತ್ತಿಗೆ ಆದಿಕಾರಣನಾದ, ಅನಂತಕಲ್ಯಾಣಗುಣಗಳನ್ನೇ ಮುಖ್ಯವೃತ್ತಿಯಾಗಿಯುಳ್ಳ ದೋಷಲೇಶವಿಲ್ಲದ, ಶ್ರೀನಿವಾಸನೆಂದು ಪ್ರಸಿದ್ಧನಾದ ಪರಬ್ರಹ್ಮನ ಗುಣಸಮುದ್ರದ ಅಮೃತಕಣಗಳನ್ನು ವರ್ಣಿಸಲು ಬೃಹಸ್ಪತ್ಯಾದಿಮಹಾಪುರುಷರೂ ಅಸಮರ್ಥರು. ಸುಖದುಃಖಗಳಲ್ಲಿ ಸಮಚಿತ್ತನಾಗಿಯೂ, ಕಾಂತಿಯೆಂಬ ಕಾಲಿವೆಗೆ ತಟಾಕದಂತೆಯೂ, ಕಲ್ಯಾಣಗಳೆಂಬ ಕಮಲಗಳಿಗೆ ಪ್ರಾತಃಕಾಲದಂತೆಯೂ, ಅಪರಿಮಿತಕರುಣಾಸಮುದ್ರನಾಗಿಯೂ, ಚತುರನಾಗಿಯೂ, ಉದಾರನಾಗಿಯೂ ಇರುವ ವೆಂಕಟೇಶ್ವರನ ಸದ್ಗುಣಗಳನ್ನು ವರ್ಣಿಸುವದು ಸರ್ವರಿಗೂ ದುಷ್ಕರವೆ. ಪರಮಪುರುಷನಾದ ಈ ವೆಂಕಟಾಚಲಪತಿಯ ಗುಣಗಣವು ವೇದಗಳಲ್ಲಿ ಸಂಪೂರ್ಣವಾಗಿ ವರ್ಣಿಸಲ್ಪಟ್ಟಿದೆ. ಈ ಪರಮಾತ್ಮನ ದರ್ಶನವಾದರೆ ಪರೋಕ್ಷವಿಷಯಗಳಲ್ಲಿ ಮನುಷ್ಯರಿಗಿರುವ ಸಂಶ

ಯುಗಳು ತತ್‍ಕ್ಷಣವೇ ವಿಚ್ಛಿನ್ನವಾಗುವವು. ಪ್ರಚಂಡರಾದ ಲೋಕಕಂಟಕರನ್ನು ಸಂಹರಿಸುವದರಲ್ಲುದ್ದಂಡನಾಗಿಯೂ, ಸೂರ್ಯಮಂಡಲದಲ್ಲಿ ಪ್ರಕಾಶಿಸುವವನಾಗಿಯೂ, ಪಾಂಡವ ಪ್ರಿಯನಾಗಿಯೂ, ಅಖಂಡಕೀರ್ತಿಯುಕ್ತನಾಗಿಯೂ, ಶ್ವೇತ ಪದ್ಮಗಳಂತಿರುವ ಪ್ರಸನ್ನಲೋಚನಗಳಿಂದೊಪ್ಪುತ್ತಿರುವವ ನಾಗಿಯೂ, ಇರುವ ವೆಂಕಟೇಶಸ್ವಾಮಿಯು ಶೇಷಶೈಲ ವೆಂಬ ಪರ್ವತಶ್ರೇಷ್ಠದಲ್ಲಿ ವಾಸಿಸುತ್ತಿರುವನು. ಮೂಗ ನು ಹೇಳಿದ ಶ್ಲೋಕವನ್ನು ಕಿವುಡರುಕೇಳಿ ಆನಂದಿಸುವರು. ಕೈಯಿಲ್ಲದವನು ಆ ಶ್ಲೋಕವನ್ನು ಶ್ರದ್ಧಾನ್ವಿತನಾಗಿ ಬರೆ ಯುವನು. ಕುರುಡನು ನೋಡಿ ಶ್ಲಾಘಿಸುವನು. ಕುಂಟನು ಈ ಶೇಷಶೈಲದ ಶಿಖರವನ್ನು ಘುಮ್ಮನೆಹಾರಿ ಸರ್‍ರನೆ ಹತ್ತು ವನು. ಬಂಜೆಯು ಮಕ್ಕಳನ್ನು ಸಾಕಿ ಬೇಸತ್ತು ಶೇಷಾ ದ್ರಿಶೃಂಗವನ್ನು ಮೆಲ್ಲಮೆಲ್ಲನೆ ಹತ್ತುವಳು. ಅಹಹಾ ! ಎಂದರೆ ಮೂಗನೆ ಮೊದಲಾದ ಅಂಗವಿಕಲರು ಭಗವತ್ಪ್ರಸಾದದಿಂದ ಇಷ್ಟಾರ್ಥವನ್ನು ಪಡೆದು ಹಾಗೆ ಮಾಡಿದರೆಂದು ಪುರಾಣವು ಘೋಷಿಸುತ್ತಿರುವುದು. ಪುರಾಣಪ್ರಸಿದ್ಧವಾದ ಆವವೆಂ ಕಟಾದ್ರಿಯು ಅತ್ಯಂತವಾಗಿ ಅನೇಕ ಶುಭಗುಹೆಗಳಿಂದ ಲೂ ಸತ್ಪುರುಷರಿಂದ ಹೊಗಳಲ್ಪಟ್ಟ ಲತಾವಿಶೇಷಗಳಿಂದಲೂ ನಿಬಿಡವಾಗಿ ಪ್ರಕಾಶಿಸುತ್ತಿರುವ ಬಿದರುಗಳಿಂದಲೂ, ಬೆಟ್ಟದ ಸಮಭೂಮಿಗಳಿಂದಲೂ ಕೂಡಿರುವುದೋ ಇಂ ತಹ ವೆಂಕಟಾದ್ರಿಯನ್ನು ವಾನರಸಮೂಹವು ಆವರಿಸಿಕೊಂ ಡಿದೆ ನೋಡು ಎಂದು ನುಡಿದು ವಿಮಾನವನ್ನು ದಕ್ಷಿಣಕ್ಕೆ ತಿರುಗಿಸಿ ಆನಂದಭರಿತನಾಗಿ ಸುತ್ತಲೂ ನೋಡಿ ವಿಶ್ವಾವಸು

ವು ಕೃಶಾನುವಿಗೆ ಮರಳಿ ಹೇಳಿದನದೆಂತೆಂದರೆ :—ಸಖನೇ ! ಈ ಸುಂದರವಾದ ವನಗಳನ್ನು ನೋಡು ಮುಂಭಾಗದಲ್ಲಿ ಮಹಾವನವೂ, ಪ್ರತಿ ಒಂದು ವನದಲ್ಲಿಯೂ ದೊಡ್ಡಪರ್ವತವೂ, ಪ್ರತಿ ಒಂದು ಪರ್ವತದಲ್ಲಿಯೂ ಗುಹೆಗಳೂ, ಪ್ರತಿ ಒಂದು ಗುಹೆಯಲ್ಲಿಯೂ ಅಪ್ರತಿಹತವಾಗಿ ಕ್ರೀಡಿಸುತ್ತಿರುವ ಸಿಂಹವು ಗರ್ಜಿಸುತ್ತಾ ಆನೆಗಳಿಗೆ ಭಯವನ್ನುಂಟುಮಾಡುತ್ತಿರುವುದು.

ಮನುಷ್ಯರನ್ನು ನುಂಗಲು ಹೊಂಚುಹಾಕುತ್ತಿರುವ ಹುಲಿಗಳಿಂದ ಭಯಂಕರವಾದ, ನೋಡಲಯೋಗ್ಯವಾದ ಈ ಅರಣ್ಯಗಳನ್ನು ಏತಕ್ಕೆವರ್ಣಿಸುತ್ತೀಯೆ? ಒಂದೆಡೆಯಲ್ಲಿ ಪಾಷಾಣರಾಶಿಯಿಂದಲೂ, ಒಂದೆಡೆಯಲ್ಲಿ ಮಹಾಸರ್ಪಗಳಿಂದಲೂ, ಒಂದೆಡೆಯಲ್ಲಿ ಕಳ್ಳರಿಂದಲೂ, ಒಂದೆಡೆಯಲ್ಲಿ ಮುಳ್ಳುಗಿಡಗಳಿಂದಲೂ, ಒಂದೆಡೆಯಲ್ಲಿ ಕ್ರೂರವಾದ ಹುಲಿಗಳಿಂದಲೂ ಮತ್ತೊಂದು ಕಡೆಯಲ್ಲಿ ಒಂದರನ್ನೊಂದುಜ್ಜುವದರಿಂದ ಉಂಟಾಗುವ ದಾವಾಗ್ನಿಯನ್ನುತ್ಪತ್ತಿಮಾಡುವ ಬಿದರುಗಳಿಂದಲೂ ಕೂಡಿರುವ ಈ ವನವನ್ನು ನೋಡಿ ನನಗೆ ಬಹಳ ಭಯವಾಗಿದೆ.

ವಿಶ್ವಾವಸು.—ಸ್ನೇಹಿತನೇ ! ಈ ಅರಣ್ಯಗಳ ಗುಣಗಳನ್ನೂ ಗ್ರಹಿಸುವವನಾಗು. ಅನಾಯಾಸದಿಂದ ಹೊಂದಲು ಶಕ್ಯವಾದ ರಾಜಭೋಗ್ಯವಾದ ಚೂತಪನಸಾದಿಫಲಗಳಿಂದಲೂ, ವಿಶಾಲಾಕ್ಷಿಯರು ಕೋರುವ ಪುಷ್ಪಗಳಿಂದಲೂ, ಸೂರ್ಯರಶ್ಮಿಪ್ರವೇಶವೇ ಇಲ್ಲದ ಗವಿಗಳಿಂದಲೂ ಒಪ್ಪುತ್ತಿರುವ ಈ ಮಹಾವನದಲ್ಲಿರುವ ಜನರ ಭಾಗ್ಯವು ವಾಚಾಮ

ಗೋಚರವಾಗಿದೆ ಎಂದು ಪೇಳುತ್ತ ಮುಂದಕ್ಕೆ ತೆರಳಿ ಕೃಶಾನುವಿಗೆ ನುಡಿದನದೆಂತೆಂದರೆ:—

ನರಕೇಸರಿಯಾದ ಸ್ವಾಮಿಯ ಬೆಳ್ಳಗಿರುವ ಕೋರೆ ಹಲ್ಲುಗಳ ಕಾಂತಿಯೆಂಬ ವಿಚಿತ್ರವಾದ ಬೆಳ್ದಿಂಗಳಿಂದ ಸ್ಫಟಿಕಾಚಲದಂತಿರುವ ಘಟಿಕಾಚಲವೆಂದು ಪ್ರಸಿದ್ಧವಾದ ಚೋಳಂಗಿಪುರವನ್ನು ನೋಡು. ಇಲ್ಲಿ ಲಕ್ಷ್ಮೀಸಂಭೋಗವರ್ಧನನಾಗಿಯೂ, ಭಕ್ತಪರಾಧೀನನಾಗುದರಿಂದ ತನ್ನನ್ನು ಧ್ಯಾನಿಸುವವರಿಗೆ ನರಕಯಾತನೆಯನ್ನು ತಪ್ಪಿಸುವವನಾಗಿಯೂ, ಶಂಖಚಕ್ರಗದಾಧರನಾಗಿಯೂ, ಸುರಗಣವಂದಿತನಾಗಿಯೂ, ಇರುವ ಶ್ರೀಮನ್ಮಹಾವಿಷ್ಣುವು ಸರ್ವೋತ್ಕೃಷ್ಟನಾಗಿರುವನು.

ಕೃಶಾನು.—ಮಿತ್ರನೇ! ಕ್ರೋಧಮಯನಾದ ನರಸಿಂಹನನ್ನು ಏತಕ್ಕೆ ಹೊಗಳುವೆ? ಭಕ್ತನಾದ ಬಬ್ಬ ಪ್ರಹ್ಲಾದನನ್ನು ಸಂತೋಷಿಸಲೋಸುಗ ಸಿಂಹಶರೀರವನ್ನು ಧರಿಸಿ ಜಗತ್ತಿಗೆಲ್ಲಾ ಭೀತಿಯನ್ನುಂಟುಮಾಡಿದನು. ಇಂತಹ ನರಸಿಂಹನು ಸ್ತುತ್ಯರ್ಹನೆ?

ವಿಶ್ವಾವಸು.—ಸ್ನೇಹಿತನೆ! ಹೀಗೆ ನುಡಿಯಬೇಡ. ಪಾಪಾತ್ಮರಲ್ಲಗ್ರೇಸರನಾದ ಹಿರಣ್ಯಕಶಿಪುವೆಂಬ ದಾನವೇಂದ್ರನಿಂದ ಪೀಡಿಸಲ್ಪಟ್ಟ ಭುವನತ್ರಯದ ಶೋಕವನ್ನು ನಾಶಮಾಡಿ, ದೇಹಾಭಿಮಾನರಹಿತನಾದ, ಭಕ್ತಾಗ್ರಗಣ್ಯನಾದ ಪ್ರಹ್ಲಾದನನ್ನು ಸಂರಕ್ಷಿಸಲೋಸುಗ ಸಂಭ್ರಮದೊಡನೆ ಸ್ತಂಭದಲ್ಲಾವಿರ್ಭವಿಸಿದನು. ಇದು ಲೋಕಕ್ಕುಪಕಾರವೋ ಅಪಕಾರವೋ ನೀನೇ ಯೋಚಿಸುವವನಾಗು. ಭಗವಂತನು

ಮನುಷ್ಯತ್ವವನ್ನೂ ಸಿಂಹತ್ವವನ್ನೂ ಸ್ವೀಕರಿಸಿ ಸ್ಥಾವರ ವಾದ ಸ್ತಂಭದಲ್ಲಿ ತತ್ಕ್ಷಣವೇ ಆವಿರ್ಭವಿಸಿದನು. ಇದರಿಂದ ಆ ಪರಮಾತ್ಮನ ಅಘಟನಘಟನಾಸಾಮರ್ಥ್ಯವು ಪಾಮರ ಪ್ರಚುರವಾದ ಈ ಲೋಕದಲ್ಲಿ ವ್ಯಕ್ತಮಾಡಲ್ಪಟ್ಟಿತು. 'ಅನಿತ್ಯಾನಿ ಶರೀರಾಣಿ' ಎಂದು ಶಾಸ್ತ್ರವಿರುವದರಿಂದ ಪ್ರಾಜ್ಞನು ಘಟಿಕಾಚಲದಲ್ಲಿ ವಾಸಮಾಡಿ ನರಸಿಂಹನ ಪಾದಪದ್ಮಗಳನ್ನು ಅನವರತವೂ ಭಕ್ತಿಪೂರ್ವಕವಾಗಿ ಸೇವಿಸಿದರೆ ನರಕದಲ್ಲೆಂದಿಗೂ ಬೀಳದೆ ಪರಮಗತಿಯನ್ನೈದುವನು ಎಂದು ನುಡಿದು ವಿಮಾನವನ್ನು ಮುಂದೆ ತಳ್ಳಿ ವಿಶ್ವಾವಸುವು ಕೃಶಾನುವಿಗೆ ಪೇಳಿದನದೆಂತೆಂದರೆ :—

ಎಲೈ ಸಖನೆ! ಮುಂದೆ ಇರುವ ಈ ಕ್ಷೇತ್ರಕ್ಕೆ 'ವೀಕ್ಷಾರಣ್ಯ' ಎಂದು ಹೆಸರು. ಈ ಸರೋವರಕ್ಕೆ 'ಹೃತ್ತಾಪನಾಶಿನೀ' ಎಂದು ಹೆಸರು. ಶಾಲಿಹೋತ್ರನೆಂಬ ಮುನಿವರನಿಂದ ಪೂಜಿಸಲ್ಪಟ್ಟ 'ಕುಶಸ್ಥಲೀ' ಎಂಬ ನದಿಯ ಸಮೀಪದಲ್ಲಿರುವ ಕ್ಷೇತ್ರವನ್ನಾಶ್ರಯಿಸಿರುವ, ನೀಲಮೇಘಶ್ಯಾಮಸುಂದರನಾದ, ವೀರರಾಘವನೆಂದು ಪ್ರಸಿದ್ಧನಾದ, ಶ್ರೀಮನ್ನಾರಾಯಣನು ಅಗ್ನಿಯಂತೆ ದೇದೀಪ್ಯಮಾನನಾಗಿ ಈ ಪುಣ್ಯಕ್ಷೇತ್ರದಲ್ಲಿ ಪ್ರಕಾಶಿಸುತ್ತಿರುವನು.

ಕೃಶಾನು.—ಮಿತ್ರನೇ! ವೆಂಕಟೇಶಸ್ವಾಮಿಯ ಹಾಗೆ ಪರಸ್ವಹರಣದಲ್ಲುದ್ಯುಕ್ತನಾದ ವೀರರಾಘವಸ್ವಾಮಿಯನ್ನು ಏಕೆ ಸ್ತುತಿಸುವೆ ?

ವಿಶ್ವಾವಸು.—ಆ ವೆಂಕಟೇಶಸ್ವಾಮಿಯನ್ನು ಕುರಿತು ನಾನು ಪೇಳಿದ ಸಮಾಧಾನವು ಇಲ್ಲಿಯೂ ಅನ್ವಯಿಸುವುದು.

ತನ್ನ ಜಾಗ್ರದವಸ್ಥೆಯಲ್ಲಿ ಜಗತ್ಸೃಷ್ಟಿಯನ್ನು ಮಾಡುವವನಾಗಿ, ವಕ್ಷಸ್ಥಲದಲ್ಲಿ ವಾಸಮಾಡುವ ಲಕ್ಷ್ಮೀದೇವಿಯ ಪಾದಗಳ ಕೆಂಪರಗಿನಿಂದ ಲಿಪ್ತವಾದ ಎದೆಯುಳ್ಳಂಥಾಗಿರುವವನಾಗಿ ಶಿವಾದಿಸರ್ವದೇವತೆಗಳಿಂದಲೂ ಸನ್ನುತನಾಗಿ ಬುದ್ಧಿ, ಕ್ಷಮೆ, ಆಯುಸ್ಸು, ಧನ, ಕೀರ್ತಿ, ಮೋಕ್ಷ, ಇವುಗಳನ್ನು ಕೊಡುವಂತಹ ವೀರರಾಘವಸ್ವಾಮಿಯು ಭಾರ್ಯೆಯಾದ ಕನಕವಲ್ಲೀದೇವಿಯೊಡನೆ ವೀಕ್ಷಾರಣ್ಯದಲ್ಲಿ ವಿಹರಿಸುತ್ತಿರುವನು; ಎಂದು ಪೇಳಿ ವಿಮಾನವನ್ನು ಮುಂದಕ್ಕೆ ತಳ್ಳಿ ರಾಮಾನುಜಾಚಾರ್ಯರ ಜನ್ಮಕ್ಷೇತ್ರವಾದ ಪೆರಂಬೂದೂರ್ (ಭೂತಪುರೀ) ಎಂಬ ಪಟ್ಟಣವನ್ನು ವಿಶ್ವಾವಸುವು ವರ್ಣಿಸಲಾರಂಭಿಸಿದನವೆಂತೆಂದರೆ:—ಸಕಲದೋಷಾಪಹಾರಕವಾದ ಈ ಪುಣ್ಯಸ್ಥಲದಲ್ಲಿ ವೇದಾಂತಭಾಷ್ಯವನ್ನು ಪ್ರಕಟಿಸಿ, ವಿಶಿಷ್ಟಾದ್ವೈತಮತವನ್ನು ಸ್ಥಾಪಿಸಿ, ಕಾಮಕ್ರೋಧಾದಿಗಳೆಂಬ ಅಂತಶ್ಶತ್ರುಗಳನ್ನು ಜಯಿಸಿ, ಅನೇಕ ಮತಗ್ರಂಥಗಳನ್ನು ಬರೆದು, ಅಪಾರಮಹಿಮೆಯನ್ನೂ ಅನಂತ ಕೀರ್ತಿಯನ್ನೂ ಪಡೆದ ಶ್ರೀರಾಮಾನುಜಾಚಾರ್ಯರು ಅನವರತವೂ ನಮಗೆ ಶುಭವನ್ನೀಯಲಿ.

ಕೃಶಾನು:—ನೀನು ಹೇಳಿದುದು ಸತ್ಯವೇ ಅಹುದು. ಆದರೆ ರಾಮಾನುಜ ಮತಾವಲಂಬಿಗಳ ಪರಾವಹೇಳನಾದಿ ದೋಷಗಳನ್ನೇತಕ್ಕೆ ಗ್ರಹಿಸಲಿಲ್ಲ? ರಾಮಾನುಜೀಯರು ಸ್ನಾನಸಂಧ್ಯಾಜಪಾಧ್ಯಯನಾದಿಗಳಿಂದ ಪೂರ್ಣರಾಗಿ ಮತಾಂತರಗಳನ್ನಾಶ್ರಯಿಸಿರುವ ಪಂಡಿತರ ಪಂಕ್ತಿಯಲ್ಲಿ ಊಟಮಾಡುವುದಿಲ್ಲ. ಮತಾಂತರಸ್ಥರಿಂದ ನೋಡಲ್ಪಟ್ಟ ಅನ್ನ

ವನ್ನು ಮುಟ್ಟುವದೇ ಇಲ್ಲ. ಇದು ಹಾಗಿರಲಿ! ಪ್ರಾಯ
ಶಃ ರಾಮಾನುಜೀಯರು ಸ್ವಮತಸ್ಥರೊಡನೆಯೂ ಊಟ
ಮಾಡುವದಿಲ್ಲ. ಆಶ್ಚರ್ಯ! ಬ್ರಹ್ಮಕುಲೋತ್ಪನ್ನರಾದಾ
ಗ್ಯೂ ಈ ರಾಮಾನುಜೀಯರು ಸಕಲಪುರುಷಾರ್ಥಸಾಧಕ
ವಾದ ವೇದಚತುಷ್ಟಯವು ಸರ್ವಸುಲಭವಾಗಿದ್ದರೂ
ದ್ರಾವಿಡೀಭಾಷೆಯಲ್ಲಿರುವ ಪ್ರಬಂಧವನ್ನು ಅತಿಪ್ರಯಾಸ
ದಿಂದ ಓದುವರು. ಇದು ಅನುಚಿತವು. ಕ್ಷೀರಸಮುದ್ರ
ದ ತಟವನ್ನು ಹೊಂದಿದವನು ಕ್ಷೀರಕ್ಕೋಸ್ಕರ ಗೊಲ್ಲನ
ಮನೆಯನ್ನು ಹುಡುಕಿಕೊಂಡು ಓಡುವನೆ?

ಬ್ರಹ್ಮಯಜ್ಞೋಪಾಸನಾತಿಥಿಪೂಜಾದೇವರ್ಷಿಪಿತೃತ
ರ್ಪಣವೈಶ್ವದೇವಗಳೆಂಬ ಪಂಚಮಹಾ ಯಜ್ಞಗಳನ್ನು
ಬಿಟ್ಟು ದ್ರವಿಡಭಾಷಾವಾಕ್ಯಗಳಿಂದ ವೇದಶಾಸ್ತ್ರಗಳಮಾರ್ಗ
ವನ್ನರಿಯದ ಜನರನ್ನು ಮೋಹಪಡಿಸಿ ಹಲವು ರಾಮಾನುಜೀ
ಯರು ಸ್ವಮತಕ್ಕೆ ಸೇರಿಸಿಕೊಳ್ಳುವುರು. ಜ್ಯೋತಿಷ್ಟೋ
ಮಾದಿಯಜ್ಞಗಳನ್ನು ಕಾವ್ಯಗಳಿಂದು ದೂಷಿಸುವರು.
ಸತ್ಪುರುಷರನ್ನು ದ್ವೇಷಿಸುವರು. ಸ್ವಮತಸನ್ಯಾಸಿಯ
ನ್ನು ಗೃಹಸ್ಥರಿಗೆ ನಮಸ್ಕರಿಸುವಂತೆ ಮಾಡುವರು. ಶ್ರಾದ್ಧ
ವನ್ನು ಶ್ರದ್ಧಾಯುಕ್ತರಾಗಿ ಮಾಡದೇಬಿಡುವರು. ಇಂತಹ
ಕೆಲವು ರಾಮಾನುಜೀಯರು ಶ್ರುತಿಸ್ಮೃತಿದೂರವಾದ ಕ
ರ್ಮಗಳಿಂದ ಕಾಲವಂ ಕಳೆಯುವರು. ರಾಮಾನುಜೀಯ
ರು ದೇವತಾರ್ಚನಾಕಾಲದಲ್ಲಿ ಲೋಕಪ್ರಸಿದ್ಧವಾದ ಘಂಟಾ
ನಾದವನ್ನು ಮಾಡುವದಿಲ್ಲ. ವೇದಗಳಲ್ಲಿ ಪ್ರಕಟಿತವಾದ
ಲಕ್ಷ್ಮೀದೇವಿಯ ಸ್ವಾತಂತ್ರ್ಯವನ್ನು ಖಂಡಿಸುವರು.

ಸ್ವಮತಸ್ಥರ ಸಭೆಯಲ್ಲಿ ತಮ್ಮ ಪಾದಜಲವನ್ನು ಕುಡಿಯು ವರು. ಸ್ವಾಮಿಯನ್ನು ಸ್ವಕೃತದೋಷಗಳಿಗೆ ಗುರಿಮಾಡು ವರು. ಶ್ರುತಿಸ್ಮೃತಿಪಾರಂಗತರಾದವರು ಪಂಚಮಹಾ ಯಜ್ಞಗಳನ್ನೂ, ಜ್ಯೋತಿಷ್ಟೋಮಾದಿಕ್ರತುಗಳನ್ನೂ ಮಾ ಡುವರು. ಚಂದ್ರಸೂರ್ಯಗ್ರಹಣಗಳಲ್ಲಿಯೂ, ಸಂಕ್ರಮ ಣಕಾಲಗಳಲ್ಲಿಯೂ ಪೈತೃಕಕರ್ಮವನ್ನೂ ನೈಮಿತ್ತಿಕ ಕರ್ಮವನ್ನೂ ಮಾಡುವರು. ವೇದಮಾರ್ಗವಿಧ್ವಂಸಕರಾ ದ ಈ ರಾಮಾನುಜೀಯರಾದರೋ ಇಂತಹ ಕರ್ಮವನ್ನು ಕಾಮ್ಯವೆಂದು ನಿಂದಿಸಿ ತ್ಯಜಿಸುವರು. ಆಹಾರಸಿದ್ಧಾ ದಿಗಳನ್ನಾದರೋ ನಿತ್ಯಕರ್ಮಗಳೆಂದು ಭಾವಿಸಿ ಆತ್ಮವಿ ಚಾರವಂಮಾಡದೆ ಕಾಲವಂ ಕಳೆಯುವರು. ಈ ರಾಮಾ ನುಜೀಯರಲ್ಲಿ ತೆಂಗಲರೆಂಬುವರು ಶಾಸ್ತ್ರಜ್ಞರನ್ನು ಪುರಸ್ಕರಿಸುವದಿಲ್ಲ. ಸೋಮಯಾಜಿಗಳನ್ನು ಅಪಹಾಸಕ್ಕೆ ಗುರಿಮಾಡುವರು. ನಿರಕ್ಷರಕುಕ್ಷಿಗಳಾದ ಆಚಾರ್ಯಪುರುಷ ರನ್ನು ಸನ್ಮಾನಿಸುವರು. ವೇದಗಳನ್ನು ಧಿಕ್ಕರಿಸುವರು. ಈಶ್ವರನ ಜಟಾಜೂಟದಿಂದ ಬಿದ್ದವರ್ಷವೆಂದು ಲೋಕಪಾ ವನಿಯಾದ ಗಂಗಾನದಿಯನ್ನು ತುಚ್ಛೀಕರಿಸುವರು. ದೇಹ ಶುದ್ಧಿಗೆ ಕಾರಣವಾದ ಪಂಚಗವ್ಯವನ್ನು ಪಶುಪುರೀಷಭಾಗ ವೆಂದು ಧಿಕ್ಕರಿಸಿ ಕುಡಿಯುವದಿಲ್ಲ. ಆದುದರಿಂದ ವರ್ಣಾಶ್ರ ಮಾಚಾರಭ್ರಷ್ಟರಾದ ಅವಿನೀತರಾದ ತೆಂಗಲರೆಂಬ ಕಪಟ ಬ್ರಾಹ್ಮಣರ ದೋಷಗಳನ್ನೆಣಿಸಲು ಯಾರಿಗೆತಾನೆಸಾಧ್ಯವು?

ವಿಶ್ವಾವಸು—ನಿಷ್ಕಳಂಕರಾದ ವಿಶಿಷ್ಟಾದ್ವೈತ ತತ್ತ್ವ ನಿಷ್ಠಾಗರಿಷ್ಠರಾದ ರಾಮಾನುಜೀಯರನ್ನು ದೂಷಿಸಲು ಕಾ

ರಣವೇನು? ದುಷ್ಟರು ಸರ್ವಜ್ಞರಲ್ಲಿ ವೃಥಾದೋಷಗಳ ನ್ನಾರೋಪಿಸುವುದು ಅವರ ಸ್ವಭಾವವೇ! ಎಲೈಖಲನೇ! ಅವರ ಪರಮಪಾವನವಾದ ಚರಿತ್ರೆಯನ್ನು ಕೇಳು. ರಾಮಾನುಜೀಯರು ಉಚ್ಛಿಷ್ಟಾನ್ನವನ್ನು ಭುಜಿಸುವದಿಲ್ಲ. ದುರ್ಜನರ ಸಹವಾಸವನ್ನೆಂದಿಗೂ ಮಾಡುವದಿಲ್ಲ. ಪ್ರಾಣೋತ್ಕ್ರಮಣಕಾಲದಲ್ಲಿಯೂ ಹೆರರ ಮನೆಯಲ್ಲಿ ಜಲವನ್ನು ಮುಟ್ಟುವದಿಲ್ಲ. ಸ್ವರ್ಗಾದಿಸುಖವನ್ನು ಕೊಡುವ ಕರ್ಮವನ್ನು ಮಾಡುವದಿಲ್ಲ. ಭಗವತ್ಕೈಂಕರ್ಯದಲ್ಲಿ ನಿರತರಾದ ಈ ಶ್ರೀವೈಷ್ಣವರ ರೀತಿಯು ಸರ್ವರಿಂದಲೂ ಶ್ಲಾಘಿಸಲ್ಪಡುತ್ತಿದೆ. ಲಲಾಟದಲ್ಲಿ ಶ್ವೇತಮೃತ್ತಿಕೆಯ ತಿಲಕದಿಂದಲೂ, ಕಂಠದಲ್ಲಿ ಅಕ್ಷಮಾಲೆಯಿಂದಲೂ, ಭುಜಾಗ್ರಗಳಲ್ಲಿ ಶಂಖಚಕ್ರಚಿಹ್ನೆಗಳಿಂದಲೂ, ವಕ್ತ್ರದಲ್ಲಿ ವಾಸುದೇವಗುಣಕೀರ್ತನ ನಿರತವಾದ ವಾಕ್ಕುಗಳಿಂದಲೂ ಪ್ರಕಾಶಿಸುತ್ತಿರುವ ಈ ಶ್ರೀವೈಷ್ಣವರ ದರ್ಶನವು ಮೋಕ್ಷಾವಹವೆಂದು ತಿಳಿ. ಶ್ರೀವೈಷ್ಣವರು ಇತರರಿಂದ ನೋಡಲ್ಪಟ್ಟ ಅನ್ನವನ್ನು ತಿನ್ನುವದಿಲ್ಲವೆಂಬುದು ಗುಣವೋ ದೋಷವೋ ಗುಣಾಗುಣಜ್ಞರ ಮೂಲಕವಾಗಿ ಗ್ರಹಿಸುವವನಾಗು. ಉಪನಿಷತ್ತುಗಳು ಜನರಿಗೆ ದುರವಗಾಹವೆಂದು ಯೋಚಿಸಿ ದ್ರವಿಡಭಾಷೆಯಲ್ಲಿ ಉಪನಿಷತ್ತುಗಳ ತಾತ್ಪರ್ಯವನ್ನು ಶಠಕೋಪನೆಂಬ ಮುನಿಯು ಪ್ರಬಂಧರೂಪವಾಗಿ ರಚಿಸಿದನು. ವೇದಾರ್ಥವನ್ನು ಬೋಧಿಸುವ ಸ್ಮೃತಿಪುರಾಣಗಳನ್ನು ಓದುವ ಜನರು ಹೇಗೆ ದೂಷಣೀಯರಲ್ಲವೋ ಹಾಗೆ ಉಪನಿಷತ್ಸಾರವನ್ನು ಬೋಧಿಸುವ ಪ್ರಬಂಧವನ್ನು ಪಠಿಸುವ ಶ್ರೀ ವೈಷ್ಣವರು ನಿಂದನೀಯರ

ಲ್ಲವೆಂದು ತಿಳಿ. ಶ್ಲಾಘ್ಯವಾದ ವಿಷಯವು ದ್ರವಿಡಭಾಷೆಯ ಲ್ಲುಕ್ತವಾಗಿದ್ದರೂ ಸಜ್ಜನರಿಗೆ ಗ್ರಾಹ್ಯವಾಗುವುದು. ಅಯುಕ್ತವಾದ ವಿಷಯವು ಗೀರ್ವಾಣಭಾಷೆಯಲ್ಲಿ ನಿರೂಪಿತವಾಗಿದ್ದರೂ ನಿಂದ್ಯವಾಗುವುದು. ಹೇಗೆಂದರೆ ಕುರೂಪನಾದ ಮನುಷ್ಯನು ಹರಿಭಕ್ತಿಯುಳ್ಳವನಾದರೆ ಸ್ತುತ್ಯರ್ಹನಾಗುವನು. ಸೌಂದರ್ಯಶಾಲಿಯಾದರೂ ಹರಿಭಕ್ತಿಹೀನನಾಗಿ ನಾರೀಸ್ತನಮರ್ದನದಲ್ಲಾಸಕ್ತನಾದರೆ ದೂಷಣೆಗೆ ಗುರಿಯಾಗುವನು. "ಇಲಕ್ಕಣಂ" ಎಂಬ ಅಗಸ್ತ್ಯವ್ಯಾಕರಣಾನುಸಾರವಾಗಿ ವ್ಯುತ್ಪನ್ನವಾದ ದ್ರಾವಿಡಶಬ್ದಗಳು ಸಂಸ್ಕೃತಪದಗಳಿಗೆ ಹೇಗೆ ಕೀಳಾಗುವುವು? ಸಮುದ್ರವನ್ನು ಪಾನಮಾಡಿ ಪ್ರಸಿದ್ಧನಾದ ಅಗಸ್ತ್ಯಮಹರ್ಷಿಯಿಂದ ಪ್ರಣೀತವಾದ ವ್ಯಾಕರಣದಿಂದ ಸಂಸ್ಕೃತವಾಗಿ, ಶಠಕೋಪಾದಿ ಮುನಿವರರು ಬರೆದ ಪ್ರಬಂಧಗಳಲ್ಲಿ ನಿಬಿಡವಾಗಿ, ರಾಮಾನುಜಾದಿ ಸದ್ಗುರುಗಳಿಂದ ಪಠಿಸಲ್ಪಟ್ಟ ದ್ರಾವಿಡಶಬ್ದಗಳ ಉತ್ಕರ್ಷವು ಅನಿರ್ವಚನೀಯವಾಗಿರುವುದು. ಆಲಸ್ಯದಿಂದ ನಿತ್ಯಕರ್ಮವನ್ನು ಬಿಡುವ ತೆಂಗಲರ ಸಂಸಾರದುಃಖವು ಅವರ ಭಗವದ್ಭಕ್ತಿಯಿಂದ ಪರಿಹರಿಸಲ್ಪಡುವುದು. ಈ ತೆಂಗಲರು ಭಗವದ್ವಿಷಯಗಳ ಅರ್ಥವನ್ನು ವರ್ಣಿಸುತ್ತಲೂ, ರಾಮಾಯಣಪಾರಾಯಣವಂ ಮಾಡುತ್ತಲೂ, ವೇದಸಮಾನವಾದ ಪ್ರಬಂಧಗಳನ್ನು ಶಿಷ್ಯರಿಗೆ ಬೋಧಿಸುತ್ತಲೂ, ರಾಮಾನುಜೀಯಭಾಷ್ಯವನ್ನು ಪಠಿಸುತ್ತಲೂ, ಭಗವತ್ಕೈಂಕರ್ಯವಂ ಮಾಡುತ್ತಲೂ, ಆರ್ಯರನ್ನು ಪ್ರಣಾಮಾದಿಗಳಿಂದ ಸಮಾಶ್ರಯಿಸುತ್ತಲೂ, ಕಾಲವನ್ನು ಕ್ಷಣದಂತೆ ಕಳೆ

ಯುವರು. ಶ್ರುತಿಗಳು ಭಿನ್ನಭಿನ್ನವಾಗಿದ್ದರೂ, ಅವುಗಳಿಗೆ ಪರಸ್ಪರಾವಿರೋಧಾರ್ಥತಾತ್ಪರ್ಯಗಳನ್ನು ಪ್ರಕಟಿಸಿದ, ನಿಖಿಲಗುಣಾಭಿರಾಮನಾದ ವಿದ್ಯಾನಿಧಿಯಾದ ರಾಮಾನುಜಗುರುವನ್ನು ವಂದಿಸುತ್ತೇನೆ.

ಕೃಶಾನು—ರಾಮಾನುಜೀಯಮತಸ್ಥರ ಆಚಾರ್ಯಪುರುಷರ ದುರಾಚಾರಗಳು ಪ್ರಾಜ್ಞರಿಗೆ ಅನಭಿಮತವು. ಮಾರ್ಗದಲ್ಲಿ ಬ್ರಾಹ್ಮಣಾದಿಚತುರ್ವರ್ಣಸ್ಥರನ್ನು ಕೊಂದು, ಅವರ ಹಣವನ್ನು ಅಪಹರಿಸಿ, ಬೆಟ್ಟಗುಟ್ಟಗಳಲ್ಲಿ ವಾಸಿಸುವ, ಮತ್ತರಾಗಿಯೂ, ದುರ್ವೃತ್ತರಾಗಿಯೂ ಇರುವ ಚೋರರಿಗೂ ಇತರನೀಚರಿಗೂ ಆಚಾರ್ಯಪುರುಷರು ಚಕ್ರಾಂಕನೆಯಂ ಮಾಡಿ ಮಂತ್ರಗಳನ್ನುಪದೇಶಿಸುವರು. ಇಂತಹ ನೀಚಶಿಷ್ಯರಿಂದ ಕೊಡಲ್ಪಟ್ಟ ಹಣದಿಂದ ವಂಶಪಾರಂಪರ್ಯವಾಗಿ ಜೀವಿಸುವರು. ಜಾರರು, ಜೋರರು, ಕಿರಾತರು, ರಾಜಾಧಮರು ಇಂತಹ ಶಿಷ್ಯವರ್ಗದಿಂದ ಕೂಡಿದವರಾಗಿ, ಆ ಶಿಷ್ಯರು ಕೊಟ್ಟ ಹಣದಿಂದ ಮತ್ತರಾಗಿ, ವೇದಮಾರ್ಗದೂರರಾದ ಈ ಆಚಾರ್ಯಪುರುಷರು ಬ್ರಹ್ಮನಿಷ್ಠರಾದ ಶ್ರೋತ್ರಿಯರೊಡನೆ ಊಟಮಾಡುವುದಿಲ್ಲ. ಅಂತಹ ಶ್ರೋತ್ರಿಯರಿಗೆ ಬಂದುಸಲವಾದರೂ ನಮಸ್ಕಾರ ಮಾಡುವದಿಲ್ಲ. ಆದುದರಿಂದ ಇವರಿಗೆ ಆಚಾರ್ಯತ್ವವು ಸಂಕೇತಮಾತ್ರವೇ ಹೊರತು ಯಥಾರ್ಥವಾದುದಲ್ಲ. ಇಂತಹ ಆಚಾರ್ಯಪುರುಷರನ್ನು ಸನ್ಮಾನಿಸುವ ಜನರ ಮೌಢ್ಯವನ್ನು ತಪ್ಪಿಸಲಾಗದು. ಸಂಸಾರಸಮುದ್ರವನ್ನು ದಾಟಲು ತಾನೇ ಅಶಕ್ತನಾಗಿರುವಲ್ಲಿ ಇಂತಹ ಆಚಾರ್ಯಪುರುಷನು

ಇತರರನ್ನು ಹೇಗೆ ದಾಟಿಸಲಾಪನು? ಎಂಬುದನ್ನು ಪಂಡಿತಪಾಮರರಿಬ್ಬರೂ ಯೋಚಿಸದೆ, ಧನವ್ಯಯವನ್ನೂ ಎಣಿಸದೆ, ಆ ಆಚಾರ್ಯಪುರುಷನ ಪುಸ್ತಕಾಡಂಬರದಿಂದಲೂ, ಅನೇಕವಾದ ಉಪಕರಣಗಳಿಂದ ಕೂಡಿದ ರಾಮಕೃಷ್ಣಾದಿ ದೇವತಾವಿಗ್ರಹಗಳಿಂದಲೂ, ಭ್ರಾಂತರಾಗಿ ಮೂಢನಾದ ಆಚಾರ್ಯನನ್ನು ಆಶ್ರಯಿಸುವರು. ಇಷ್ಟೇಅಲ್ಲ. ಲೋಕದಲ್ಲಿ ಶುದ್ಧಚಿತ್ತರಾದ ಜ್ಞಾನಿಗಳನೇಕರಿದ್ದರೂ ದುರಾಚಾರಪರನಾಗಿಯೂ, ವೇದಶಾಸ್ತ್ರಗಳನ್ನರಿಯದವನಾಗಿಯೂ, ಆಚಾರ್ಯಪುರುಷಪರಂಪರೆಯಲ್ಲಿ ಸೇರಿದವನಾಗಿಯೂ ಇರುವ ಮೂಢನನ್ನಾದರೂ ಗುರುವೆಂದು ಪೂಜಿಸುತ್ತಾರೆ. ಕಷ್ಟ ಕಷ್ಟ !

ಕಲಿಚಮತ್ಕಾರವನ್ನು ಇನ್ನೂ ಕೇಳುವನಾಗು. ಯುಗಾಂತರಗಳಲ್ಲಿದ್ದ ವಸಿಷ್ಠವಾಮದೇವಾದಿಮಹರ್ಷಿಗಳು ವಿದ್ಯಾಭಿಲಾಷಿಗಳಾದ ಶಿಷ್ಯರನ್ನು ಅವರ ಗುರುಶುಶ್ರೂಷೆಗಳಿಂದ ಅನೇಕಸಂವತ್ಸರಗಳು ಚೆನ್ನಾಗಿ ಪರೀಕ್ಷಿಸಿ ಸಂತುಷ್ಟರಾದಬಳಿಕ ಶಿಷ್ಯರಿಗೆ ಚತುರ್ದಶವಿದ್ಯೆಗಳನ್ನೂ ಕಲಿಸುತ್ತಿದ್ದರೆಂಬುದು ಎಲ್ಲರಿಗೂ ತಿಳಿದಿರುವದಷ್ಟೆ. ಈಗಿನ ಆಚಾರ್ಯಪುರುಷರಾದರೋ ದುಷ್ಟರನ್ನು ಬಹುಕಾಲದವರೆಗೂ ಅಶನವಸನಾದಿಗಳಿಂದಾದರಿಸಿ ಅತಿಪ್ರಯಾಸದಿಂದ ಶಿಷ್ಯರನ್ನು ಕೂಡಿಹಾಕುವರು.

ವಿಶ್ವಾವಸು:—ಎಲೈ ಮಂದಮತಿಯೆ ! ಮಹಾಪುರುಷರನ್ನು ಹೀಗೆ ದೂಷಿಸಬೇಡ. ಸತ್ಪುರುಷರನ್ನು ಸಂಸಾರಸಮುದ್ರದಿಂದ ದಾಟಿಸುಲೋಸುಗವೇ ಮರ್ತ್ಯಲೋಕದಲ್ಲಿ

ವತರಿಸಿದ, ಮಹಾಕುಲೀನರಾದ, ಧನ್ಯರಾದ ಈ ಆಚಾರ್ಯಪುರುಷರು ಆಶ್ರಿತವಾತ್ಸಲ್ಯದಿಂದ ಜ್ಞಾನಹೀನರಿಗೆ ಪಂಚಸಂಸ್ಕಾರಗಳನ್ನು ಮಾಡಿ ಪವಿತ್ರರನ್ನಾಗಿ ಮಾಡುವರು. ಇಂತಹವರು ಅವತರಿಸದಿದ್ದರೆ ಪಾಮರರನೇಕರು ಹರಿಭಕ್ತಿಹೀನರಾಗಿ, ಮಂತ್ರಮಂತ್ರಾರ್ಥಗಳನ್ನರಿಯದೆ, ಅತಪ್ತಶರೀರರಾಗಿ ನರಕದಲ್ಲಿ ಬೀಳುತ್ತಿದ್ದರು. ಗಂಗಾಸ್ನಾನದಿಂದ ಶಿಷ್ಟರೂ, ದುಷ್ಟರೂ ಹೇಗೆ ಪವಿತ್ರರಾಗುವರೋ ಹಾಗೆಯೇ ಈ ಆಚಾರ್ಯಪುರುಷರ ಪಂಚಸಂಸ್ಕಾರಗಳಿಂದ ಜಾರರೂ, ಚೋರರೂ ಕೂಡ ಪವಿತ್ರರಾಗುವರು. ಸತ್ಕುಲಪ್ರಸೂತನು ಆಚಾರಶೂನ್ಯನಾದರೂ ಮಹಾತ್ಮರಿಂದ ಆದರಿಸಲ್ಪಡುವನು. ಕೆಟ್ಟವಂಶದಲ್ಲಿ ಹುಟ್ಟಿದವನು ಎಷ್ಟು ಆಚಾರಯುಕ್ತನಾದರೂ ಸಭೆಯಲ್ಲಿ ಪೂಜ್ಯನಾಗುವದಿಲ್ಲ. ಅಪೌರುಷೇಯವಾದ ಸಾಲಗ್ರಾಮವು ಎಷ್ಟುವಿಕೃತವಾದರೂ ಪ್ರಾಜ್ಞರಿಂದ ಸ್ವೀಕರಿಸಲ್ಪಡುತ್ತದೆ. ಪೌರುಷೇಯವಾದ ಸಾಲಗ್ರಾಮವು ಸರ್ವಲಕ್ಷಣಸಂಪನ್ನವಾದರೂ ಸ್ವೀಕರಿಸಲ್ಪಡುವದಿಲ್ಲ; ಎಂದು ಹೇಳಿ ವಿಮಾನವನ್ನು ಮುಂದಕ್ಕೆ ಹೊರಡಿಸಿ ಮರಳಿ ಪೇಳಲಾರಂಭಿಸಿದನದೆಂತೆಂದರೆ:—

ಎಲೈ ಸಖನೆ! ಪಾಪಗಳನ್ನು ಪರಿಹರಿಸಿ, ಯಾವಾಗಲೂ ಶುಭವನ್ನುಂಟುಮಾಡುವ ಕೈರವಣೀ (ತಿರುವಲ್ಲಿಕ್ಕೇಣಿ) ಎಂಬ ಸರೋವರವನ್ನು ನೋಡು. ಈ ಸರಸ್ತೀರದಲ್ಲಿ ಶ್ರೀಹರಿಯು ಪಾರ್ಥಸಾರಥಿಯೆಂದು ಪ್ರಸಿದ್ಧನಾಗಿ ಪ್ರಕಾಶಿಸುತ್ತಿರುವನು. ಈ ಪಾರ್ಥಸಾರಥಿಸ್ವಾಮಿಯ ಪಾದಕಮಲದಲ್ಲಿ ಹೊಳೆಯುತ್ತಿರುವ ಮರಕತಮಣಿಗಳಿಗೂ, ಭಕ್ತರು

ಸಮರ್ಪಿಸಿದ ತುಲಸೀದಳಗಳಿಗೂ ಭೇದವನ್ನರಿಯದೆ ಜನರು ಭ್ರಾಂತರಾಗಿರುವರು. ಈ ಕೈರವಣೀಕ್ಷೇತ್ರದಲ್ಲಿರುವ ಮಾನಧನರಾದ ಮಹಾಜನರು ಉಪನಿಷದರ್ಥವನ್ನು ಆಯಾಸವಿಲ್ಲದೆ ವಿಚಾರಿಸುತ್ತಲೂ, ಸತ್ಕರ್ಮಗಳನ್ನು ಆಚರಿಸುತ್ತಲೂ ಪ್ರಕಾಶಿಸುತ್ತಿರುವರು.

ಕೃಶಾನು:—ಇರಲಿ! ಇಂತಹ ಪುಣ್ಯಕ್ಷೇತ್ರವೂ ಹೂಣಾದಿಜನರಿಂದ ನಿಬಿಡವಾದ ಚನ್ನಪಟ್ಟಣದ ಸಾಮೀಪ್ಯದಿಂದ ದೂಷಣೀಯವಾಗಿದೆ. ಶೌಚಹೀನರಾದ ಇವರ ದೋಷಗಳನ್ನು ಯಾರು ತಾನೆ ಎಣಿಸಲಾಪರು? ಎಲೈ ದುರ್ವಿಧಿಯೇ! ಆಚಾರಹೀನರನ್ನು ಧನಿಕರನ್ನಾಗಿಯೂ, ಸದಾಚಾರ ಸಂಪನ್ನರಾದ ಶಿಷ್ಟರನ್ನು ಬಡವರನ್ನಾಗಿಯೂ, ದುಃಖಭಾಗಿಗಳನ್ನಾಗಿಯೂ, ದುರ್ಬುದ್ಧಿಗಳನ್ನು ಪ್ರಭುಗಳನ್ನಾಗಿಯೂ, ದಕ್ಷರನ್ನು ಭಿಕ್ಷುಗಳನ್ನಾಗಿಯೂ, ಮ್ಲೇಚ್ಛಾದಿದುಷ್ಕುಲಾಂಗನೆಯರನ್ನು ಸುಂದರಿಯರನ್ನಾಗಿಯೂ, ಬ್ರಾಹ್ಮಣಾದಿಶ್ರೇಷ್ಠಜಾತೀಯಾಂಗನೆಯರನ್ನು ಲಾವಣ್ಯಹೀನರನ್ನಾಗಿಯೂ ಸೃಷ್ಟಿಸಿದೆ. ಇವರಿಂದ ನಿನಗೇನು ಪ್ರಯೋಜನವು?

ವಿಶ್ವಾವಸು:—ಇವರಲ್ಲಿ ಗುಣಗಳನ್ನು ಗ್ರಹಿಸು. ಈ ಹೂಣರು ಪರಸ್ವವನ್ನು ಬಲಾತ್ಕಾರದಿಂದ ಅಪಹರಿಸುವದಿಲ್ಲ. ಅಸತ್ಯವನ್ನು ಹೇಳುವದಿಲ್ಲ. ಅದ್ಭುತಕಾರ್ಯಗಳನ್ನು ಮಾಡುತ್ತಾರೆ. ಆದಕಾರಣ ಈ ಹೂಣರು ದೋಷರಹಿತರಾಗಿರುವರು; ಎಂದು ನುಡಿದು ಐದುಯೋಜನಗಳ ದೂರ ಪ್ರಯಾಣಮಾಡಿ ಸಂತೋಷಭರಿತನಾಗಿ ನೋಡುತ್ತಾ ಮರಳಿ ಹೇಳಲಾರಂಭಿಸಿದನದೆಂತೆಂದರೆ:—

ಹಸ್ತಿಶೈಲದ ಸುತ್ತಲೂ ಇರುವ ಲೋಕವಿಖ್ಯಾತವಾದ ಕಾಂಚೀಪುರವರದಲ್ಲಿ ವಿಹರಿಸುತ್ತಿರುವ ಚಂಚಲಾಕ್ಷಿಯರ ಮುಖವನ್ನು ನೋಡಿನೋಡುತ್ತಿರುವ ಯಾವ ರಸಿಕರುತಾನೆ ನಿಷ್ಕಲಂಕನಾದ ಚಂದ್ರನನ್ನೂ, ನಿರ್ಮಲವಾದ ಕನ್ನಡಿಯನ್ನೂ ತಾವರೆಯನ್ನೂ ನಿಂದಿಸುವದಿಲ್ಲ? ಪಂಡಿತರ ಶಾಸ್ತ್ರತರ್ಕೆಗೆ ರಂಗಸ್ಥಲವಾಗಿಯೂ, ತೆಂಗು ಹಲಸು ಮಾವು ಮೊದಲಾದ ಮರಗಳಿಂದ ನಿಬಿಡವಾಗಿಯೂ, ನಾರೀಜನವಿಹಾರಕ್ಕೆ ಅನುಕೂಲವಾಗಿಯೂ ಇರುವ ಕಾಂಚೀನಗರಿಯು ಎಲ್ಲರ ಮನಸ್ಸನ್ನೂ ಆಕರ್ಷಿಸುತ್ತಿರುವದು. ಈ ಪುರಿಯ ದಕ್ಷಿಣದಲ್ಲಿರುವ ವೇಗವತಿಯೆಂಬ ಹೊಳೆಯು ವರದರಾಜಸ್ವಾಮಿಯ ಕರುಣಾಪ್ರವಾಹದಂತೆ ಹರಿಯುತ್ತಿರುವುದು. ತೀರದಲ್ಲಿರುವ ಮರಗಳ ಪುಷ್ಪರಸದಿಂದ ಮಧುರವಾಗಿಯೂ, ಮಂದಮಾರುತದಿಂ ತೂಗುತ್ತಿರುವ ಮರಗಳ ದೆಸೆಯಿಂದ ಬೀಳುತ್ತಿರುವ ಪುಷ್ಪಗಳಿಂದ ಉಕ್ಕಿದ ನೊರೆಗಳಿಂದ ಮಂದಸ್ಮಿತಯುಕ್ತವಾದಂತೆಯೂ ಇರುವ, ಮಹಾವೇಗದೊಡನೆ ಹರಿದು ಪೂರ್ವದಲ್ಲಿ ಬ್ರಹ್ಮದೇವನ ಯಜ್ಞವನ್ನು ಧ್ವಂಸಮಾಡಿದಂತಹ ವೇಗವತಿಯು ನಮ್ಮನ್ನು ಕಾಪಾಡಲಿ. ಸತ್ಪುರುಷರೆಂಬ ಭ್ರಮರಗಳಿಂದಲೂ, ನಿತಂಬಪ್ರದೇಶಗಳೆಂಬ ಕುಂಭಸ್ಥಲಗಳಿಂದಲೂ, ಕಲ್ಯಾಣಪರಂಪರೆಯೆಂಬ ಮದಜಲಧಾರೆಯಿಂದಲೂ, ಒಪ್ಪುತ್ತಿರುವ ಈ ಹಸ್ತಿಶೈಲವು ಗಜರಾಜನಂತೆ ವರದರಾಜಸ್ವಾಮಿಯನ್ನು ಹೊತ್ತುಕೊಂಡಿದೆ. ಹಸ್ತಿಶೈಲಕ್ಕೆ ಅಲಂಕಾರವಾಗಿಯೂ, ದಾನಪ್ರಭಾವದಿಂದ ಕಲ್ಪವೃಕ್ಷಕಾಮಧೇನುಗಳನ್ನು ಧಿಕ್ಕರಿಸುವವನಾ

ಗಿಯೂ, ಇಂದ್ರನೇ ಮೊದಲಾದ ದಿಕ್ಪಾಲಕರನ್ನು ಕಾಪಾ
ಡುವವನಾಗಿಯೂ, ಪರಮಪಾವನನಾಗಿಯೂ, ಕರುಣಾ
ರಸದಿಂದ ಪೂರಿತವಾದ ದೃಷ್ಟಿಯಿಂದೊಪ್ಪುತ್ತಿರುವವನಾ
ಗಿಯೂ, ಸಂಸಾರದುಃಖವನ್ನು ಛೇದಿಸುವವನಾಗಿಯೂ
ಇರುವ ವರದರಾಜಸ್ವಾಮಿಯೆಂಬ ತೇಜಸ್ಸಿಗೆ ನಮಸ್ಕಾರ.

ಎಲೈ ಕೃಶಾನುವೆ! ಶತ್ರುಗಳನ್ನು ಸಂಹರಿಸಿ, ಬ್ರಹ್ಮ
ನ ಅಶ್ವಮೇಧಯಾಗಕ್ಕೆ ಸಹಾಯಮಾಡಿ, ಇಂದ್ರಾದಿಸಕಲ
ದೇವತೆಗಳಿಂದಲೂ ಹೊಗಳಲ್ಪಟ್ಟು ಕಮಲದಂತೆ ವಿಶಾಲ
ವಾದ ಕಣ್ಣುಗಳುಳ್ಳ ವರದರಾಜಸ್ವಾಮಿಯನ್ನು ಯಾವಾಗ
ಲೂ ಭಜಿಸು. ಸನ್ಮಾರ್ಗವನ್ನು ತೋರಿಸುವ ಲಕ್ಷ್ಮೀಲೋ
ಲನಾದ ಚಕ್ರಪಾಣಿಯ ವಿಷಯದಲ್ಲಿ ದೋಷಾರೋಪಣೆ
ಯಂ ಮಾಡಬೇಡ. ಬ್ರಹ್ಮದೇವರು ಅಶ್ವಮೇಧಯಾಗವ
ನ್ನು ಮಾಡಿದಕಾಲದಲ್ಲಿ ತನಗೆ ಉಂಟಾದ ಅವಮಾನವನ್ನು
ಸಹಿಸದೆ ಸರಸ್ವತೀದೇವಿಯು ನದೀಪ್ರವಾಹವಾಗಿ ಪರಿಣ
ಮಿಸಿ ಯಜ್ಞಭಂಗವನ್ನು ಮಾಡಲು ದೇವತೆಗಳೆಲ್ಲರೂ ಬ
ಹಳ ಖಿನ್ನರಾದರು; ಇಂತಹ ಸಮಯದಲ್ಲಿ ಗರುಡಧ್ವಜನು
ತಾನೇ ಸೇತುವಾಗಿ ವೇಗವತಿಯ ಪ್ರವಾಹವನ್ನು ತಡೆದನು.
ಜಗಜ್ಜನನಿಯಾದ ಮಹಾಲಕ್ಷ್ಮಿಯು ವೇಗವತೀತೀರದಲ್ಲಿ ದ
ಕ್ಷಿಣದಲ್ಲಿ ಶಿರಸ್ಸು ಉತ್ತರದಲ್ಲಿ ಪಾದಗಳು ಇರುವಹಾಗೆ
ಆದಿಶೇಷನಮೇಲೆ ಮಲಗಿರುವಳು. ಇಂತಹ ಲಕ್ಷ್ಮೀದೇ
ವಿಯನ್ನು ವಂದಿಸುವೆನು. ಅಮರಪ್ರಿಯನಾಗಿಯೂ, ಅಜ್ಞಾ
ನನಾಶಕನಾಗಿಯೂ, ಇರುವ ದೀಪಪ್ರಕಾಶನೆಂದು ಪ್ರಸಿ
ದ್ಧನಾದ ಭಗವಂತನು ಇಲ್ಲಿ ಪ್ರಕಾಶಿಸುತ್ತಿರುವನು.

ಎಲೈ ಕೃಶಾನುವೆ! ಆಕಾಶವನ್ನು ಮುಟ್ಟುವಷ್ಟು ಎತ್ತರವಾದ, ಸಮೀಪದಲ್ಲಿ ಮರಗಳಲ್ಲಿ ಕಣ್ಗೊಳಿಸುತ್ತಿರುವ ಪುಷ್ಪಗಳಿಂದ ಸ್ರವಿಸುತ್ತಿರುವ ಮಕರಂದಧಾರೆಗಳಿಂದ ಅಭಿಷಿಕ್ತವಾಗಿರುವ ಈ ದೇವಾಲಯದಲ್ಲಿ ಪ್ರಕಾಶಿಸುತ್ತಿರುವ ತ್ರಿವಿಕ್ರಮಸ್ವಾಮಿಯನ್ನು ನೋಡಿ ಪಾಪರಹಿತನಾಗು. ತನ್ನನ್ನಾಶ್ರಯಿಸುವವರಿಗೆ ಶಾಶ್ವತಸುಖವನ್ನು ಕೊಟ್ಟು ಬಲಿಯ ಸೊಕ್ಕನ್ನು ಮುರಿದ ತ್ರಿವಿಕ್ರಮಸ್ವಾಮಿಯು ಸಂಸಾರ ಸಮುದ್ರದಲ್ಲಿ ಬಿದ್ದು ನರಳುತ್ತಿರುವ ನಮ್ಮ ದುಃಖವಂ ಹೋಗಲಾಡಿಸಿ ಅನವರತವೂ ಮಂಗಳವಂ ಕೊಡಲಿ.

ಕೃಶಾನು—ಅಯುಕ್ತವಾದ ಕೃತ್ಯಗಳನ್ನು ಮಾಡಿ ವಂಚಕನಾಗಿರುವ ತ್ರಿವಿಕ್ರಮನನ್ನು ಸ್ತುತಿಸಲು ಕಾರಣವೇನು? ತ್ರಿವಿಕ್ರಮಸ್ವಾಮಿಯು ಭಾಗ್ಯವಂತನಾದರೂ ರಾಕ್ಷಸಚಕ್ರವರ್ತಿಯಿಂದ ಭೂದಾನವನ್ನು ಪರಿಗ್ರಹಿಸಿ ತಾನನುಭವಿಸದೆ ಆ ಭೂಮಿಯನ್ನು ಇಂದ್ರನಿಗೆ ಕೊಟ್ಟನು. ಅತಿಪ್ರಯಾಸದಿಂದ ಪಡೆದ ವಸ್ತುವನ್ನು ಯಾವ ಪಾಮರನಾದರೂ ತಾನನುಭವಿಸದೆ ಇತರರಿಗೆ ಕೊಡುವನೆ? ನಿರಪಾಯಳಾದ ಲಕ್ಷ್ಮೀದೇವಿಯನ್ನು ವಕ್ಷಃಸ್ಥಲದಲ್ಲಿ ಧರಿಸಿರುವವನಾದರೂ, ಬ್ರಹ್ಮಚಾರಿಯಾಗಿ ಬಲಿಚಕ್ರವರ್ತಿಯಿಂದ ಭೂದಾನವನ್ನು ಪರಿಗ್ರಹಿಸಿ ರಾಕ್ಷಸಗುರುಗಳಾದ ಶುಕ್ರಾಚಾರ್ಯರಿಗೆ ಮನಃಕ್ಲೇಶವನ್ನುಂಟುಮಾಡಿದನು. ಇಂತಹ ನೀಚಕೃತ್ಯಗಳನ್ನು ಮಾಡಿದ ತ್ರಿವಿಕ್ರಮನು ಸ್ತುತ್ಯರ್ಹನೆ?

ವಿಶ್ವಾವಸು—ಭಗವಂತನನ್ನು ದೂಷಿಸಿ ಪಾಪಕ್ಕೆ ಗುರಿಯಾಗಬೇಡ. ಲೋಕೋತ್ತರಗುಣಾಢ್ಯನಾದರೂ,

ಅನೇಕರಿಗೆ ಬ್ರಹ್ಮ, ಇಂದ್ರ ಮೊದಲಾದ ಪದಗಳನ್ನು ಕೊಟ್ಟವನಾದರೂ ಶ್ರೀಮನ್ನಾರಾಯಣನು ಆಶ್ರಿತನಾದ ಇಂದ್ರನನ್ನು ರಕ್ಷಿಸಲೋಸುಗ ತನ್ನ ಅಪಾರವಾದ ಮಹಿಮೆಗೆ ಅಯೋಗ್ಯವಾದರೂ ವಾಮನಾವತಾರವನ್ನು ಧರಿಸಿ ಬಲಿಚಕ್ರವರ್ತಿಯಿಂದ ಮೂರು ಹಜ್ಜೆ ಭೂಮಿಯನ್ನು ಬೇಡಿದನು. ಸ್ವಪಾದಕಮಲದಲ್ಲಿ ಹುಟ್ಟಿದ ಗಂಗೋದಕದಿಂದ ಸ್ವರ್ಗಲೋಕಕ್ಕೆ ಜಲಸಮೃದ್ಧಿಯನ್ನುಂಟುಮಾಡಿ, ಪರಮೇಶ್ವರನಿಗೆ ದಿವ್ಯಮಣಿಮಯವಾದ ಕಿರೀಟವನ್ನು ಕೊಟ್ಟು, ಸಮುದ್ರನಿಗೆ ಮಾವನಾಗಿ ಸರ್ವೋತ್ಕೃಷ್ಟನಾದ ನಾರಾಯಣನ ಕಲ್ಯಾಣಗುಣಗಳನ್ನು ಶ್ರುತಿಸ್ಮೃತಿಗಳು ಹಗಲಿರಳೂ ಹೊಗಳುತ್ತಿರುವುವು: ಎಂದು ನುಡಿದು ಸ್ವಲ್ಪದೂರ ನಡೆದು ಮರಳಿ ಹೇಳಲಾರಂಭಿಸಿದನು.— ' ಅನವರತವೂ ತನ್ನನ್ನು ಸೇವಿಸುವ ಭಕ್ತರಿಗೆ ಕಲ್ಪವೃಕ್ಷದಂತೆಯೂ, ಅಮರಸೇನೆಯನ್ನು ರಕ್ಷಿಸಿದವಳಾಗಿಯೂ, ಶಂಕರನಿಗೆ ಮುಖ್ಯಧನವಾಗಿಯೂ, ಕಾಂಚೀಪುರಕ್ಕೆ ಶೋಭಾವಹವಾದ ಆಭರಣವಾಗಿಯೂ ಇರುವ ಕಾಮಾಕ್ಷಿಯು ಪ್ರಕಾಶಿಸುತ್ತಿರುವಳು ನೋಡು ' ಎಂದನು. ಮರಳಿ ಕಾಮಾಕ್ಷಿಯನ್ನು ವರ್ಣಿಸಿದನದೆಂತೆಂದರೆ.—

ಎಲೈ ತ್ರಿಲೋಕಸುಂದರಿಯಾದ ಕಾಮಾಕ್ಷಿಯೆ! ನಿನ್ನ ಹಲ್ಲುಗಳದಿವ್ಯಕಾಂತಿಯನ್ನು ನೋಡಿದರೆ ಯಾರುತಾನೆ ಮೊಗ್ಗೆಯನ್ನು ಧಿಕ್ಕರಿಸುವದಿಲ್ಲ? ಚಲುವಾದ ನಿನ್ನ ಮುಖಬಿಂಬವನ್ನು ನೋಡಿ ಪ್ರಾಜ್ಞರು ಚಂದ್ರನನ್ನೆಂದಿಗೂ ನೋಡಲಿಚ್ಛಿಸುವದಿಲ್ಲ. ನಿನ್ನ ನೇತ್ರಗಳನ್ನು ನೋಡಿದರೆ

ಅಪಕ್ವಬುದ್ಧಿಯುಳ್ಳ ಮಗುವೂ ಕೂಡ ಕರಿದಾವರೆಯನ್ನೆಂದಿಗೂ ಆಶಿಸುವುದಿಲ್ಲ. ನಿನ್ನ ಸುಧಾನಿರ್ಭರವಾದ ಮಾತುಗಳಾದರೋ ಮಾಧುರ್ಯದಲ್ಲಿ ಮಧುರಸವನ್ನೂ ಮೀರಿಸಲಾಪವು.

ಕೃಶಾನು—ವಿಷಮವಾದ ಕಣ್ಣುಗಳುಳ್ಳ, ಚತುರ್ವಿಧಪುರುಷಾರ್ಥಗಳಲ್ಲೊಂದಾದ ಕಾಮವನ್ನು (ಮನ್ಮಥನನ್ನು) ನಾಶಮಾಡಿದ ಮುಕ್ಕಣ್ಣನು ಪರ್ವತರಾಜಪುತ್ರಿಯಾದ ಕಾಮಾಕ್ಷಿಗೆ ಗಂಡನು. ಆನೆಯ ಮೊಗದಂತೆ ಮೊಗವುಳ್ಳ ಹೊಟ್ಟೆದುಬ್ಬಣ್ಣನಾದ ವಿನಾಯಕನು ಈಕೆಯ ಪುತ್ರರತ್ನವು! ಅಹಹಾ! ಈಕೆಯ ಸೌಂದರ್ಯದ ಉಪಯೋಗವನ್ನು ಎಷ್ಟು ವರ್ಣಿಸಲಿ! ವ್ಯರ್ಥವೇಸರಿ.

ಈಶ್ವರನಿಗೂ ಕಾಮಾಕ್ಷಿಗೂ ಉಂಟಾಗಿರುವ ದಾಂಪತ್ಯವೆಂದಿಗೂ ಅನುಕೂಲವಾದುದಲ್ಲ. ಬಹಳ ಪ್ರತಿಕೂಲವಾಗಿಯೂ, ಅಯೋಗ್ಯವಾಗಿಯೂ ಇದೆ ಎನ್ನುವುದರಲ್ಲಿ ಎಳ್ಳಷ್ಟು ಸಂಶಯವೂ ಇಲ್ಲ. ಹೇಗೆಂದರೆ:—

ಕಾಮಾಕ್ಷಿಯು ಸರ್ವಮಂಗಳೆಯೆಂದು ಪ್ರಸಿದ್ಧಳು; ಈತನು ಶ್ಮಶಾನರುದ್ರನೆಂದು ಪ್ರಸಿದ್ಧನು. ಆಕೆಯು ಹಿಮಾದ್ರಿಯ ಮಗಳು, ಸುವರ್ಣವತಿಯು; ಈತನು ದರಿದ್ರನಾದುದರಿಂದ ದಿಕ್ಕುವಿದಿಕ್ಕುಗಳಲ್ಲಿಯೂ ತಿರುಪವನ್ನು ಬೇಡುತ್ತಾನೆ. ಆಕೆಯು ಕುಂಕುಮಶೋಭಿತೆಯು; ಇವನು ಬೂದಿಬಳಿದ ಲಿಂಗ. ಆಕೆಯು ಕುಟಿಲಕೇಶಿ; ಇವನು ವಕ್ರವಕ್ರ ಜಡೆಗಳಿಂದ ಪಿಶಾಚದಂತೆ ಭಯಙ್ಕರನಾಗಿರುವನು.

ವಿಶ್ವಾವಸು—ಎಲೈ ಸಖನೆ! ಪರಮೇಶ್ವರನು ಆನೆಯ ಚರ್ಮವನ್ನೇ ಧರಿಸಲಿ. ಶ್ಮಶಾನದಲ್ಲಿಯೇ ವಾಸಿಸಲಿ. ಸರ್ಪಸಮೂಹವನ್ನೇ ಧರಿಸಲಿ! ಆದಾಗ್ಯೂ ಆತನ ಪ್ರಕೃತಿಸಿದ್ಧ

ವಾದ ಸೌಂದರ್ಯವು ಎಂದಿಗೂ ನಷ್ಟವಾಗುವದಿಲ್ಲ. ಕೊಳಕುಳ್ಳ ಜೇನು ನೊಣಗಳಿಂದಲೂ, ಹುಳಗಳಿಂದಲೂ ತುಂಬಿದ್ದರೂ, ಕೆಸರಿನಲ್ಲಿ ಬಿದ್ದಿದ್ದರೂ ಕಮಲವು ಕಮನೀಯವಾಗಿರುವುದಿಲ್ಲವೆ?

ಜಾಣೆಯಾದ ಹೆಂಗಸು ಯಾವ ಪುರುಷನಲ್ಲಿ ಅತಿಲಂಪಟಳಾಗಿ ಸ್ಥಿರಾನುರಾಗದಿಂದ ರಮಿಸುವಳೋ ಆ ಪುರುಷನು ಮನ್ಮಥನಿಗಿಂತಲೂ ಸುಂದರನೆಂದು ತಿಳಿಯತಕ್ಕುದು! ಚತುಶ್ಶಾಸ್ತ್ರಪಾರಂಗತನಾದ ಪಂಡಿತನ ಮನಸ್ಸಿಗೆ ಯಾವ ಶ್ಲೋಕವು ಇಂಪಾಗಿ ತೋರುವುದೋ ಆ ಶ್ಲೋಕವೇ ಮನೋರಂಜಕವಾದುದೆಂದು ಎಣಿಸತಕ್ಕುದು. ಇನ್ನೂ ಕೇಳು. ಶಿವನ ಫಾಲನೇತ್ರದ ದರ್ಶನದಿಂದ ಮನ್ಮಥನು ಜಯಿಸಲ್ಪಟ್ಟನೆಂಬುದು ಸರ್ವಜನಾಂಗೀಕೃತವಾದುದು. ಆದರೆ ಕಾಮನ ದೃಷ್ಟಿಯು ದರ್ಶನದಿಂದ ('ಕಾಮಾಕ್ಷಿಯು ದರ್ಶನದಿಂದ' ಎಂದು ಪರಿಹಾರ) ಶಿವನು ಜಯಿಸಲ್ಪಟ್ಟನು. ಇದೇನು ವಿಪರ್ಯಯು! ಇದೇನು ಆಶ್ಚರ್ಯ! ಅಹಹಾ!

ಪರ್ವತರಾಜಪುತ್ರಿಯಾದ ಕಾಮಾಕ್ಷಿಯು ಸಂತಾನಸಂಪತ್ತಿಯನ್ನೆಷ್ಟು ವರ್ಣಿಸೋಣ! 'ಆದೌಪೂಜ್ಯೋಗಣಾಧಿಪಃ' ಎಂಬಹಾಗೆ ಜಗನ್ಮಾನ್ಯನಾದ ಗಜಾನನೀಕೆಯ ಜ್ಯೇಷ್ಠಪುತ್ರನು. ಪಂಚವಕ್ತ್ರನಾದ, ತಂದೆಯಾದ ಈಶ್ವರನಿಗಿಂತಲೂ ಅಧಿಕನಾದ, ಷಣ್ಮುಖನೆಂದು ಪ್ರಸಿದ್ಧನಾದ ಗುಹನು ಈಕೆಯ ದ್ವಿತೀಯಕುಮಾರನು; ಎಂದು ನುಡಿದು

೧ ಈ ಗ್ರಂಥದಲ್ಲಿ 'ತಕ್ಕದ್ದು' ಎಂದು ಪ್ರಯೋಗಿಸಲ್ಪಟ್ಟಿರುವ ಕಡೆಯಲ್ಲೆಲ್ಲಾ 'ತಕ್ಕುದು' ಎಂದು ಓದಿರಿ.

ವಿಮಾನದಲ್ಲಿ ಮುಂದಕ್ಕೆ ಪ್ರಯಾಣಮಾಡಿ, ‚‚ಸೋಮಸೂರ್ಯಾಗ್ನಿಲೋಚನನಾಗಿಯೂ, ಪರ್ವತರಾಜತನಯೆಗೆ ರಮಣನಾಗಿಯೂ, ನಾಗಭೂಷಣನಾಗಿಯೂ, ಗಣನಾಥಕಾರ್ತಿಕೇಯಾದಿಪುತ್ರರತ್ನವಿರಾಜಿತನಾಗಿಯೂ ಇರುವ ಸಾಕ್ಷಾಚ್ಚಂದ್ರಮೌಳೀಶ್ವರನು ಕಾಂಚೀಪುರಿಯಲ್ಲಿ ಆಮ್ರತರುಮೂಲದಲ್ಲಾವಿರ್ಭವಿಸಿದನು'' ಎಂದು ಹೇಳಿದನು.

ಕೃಶಾನು—ಮಿತ್ರನೆ! ಲೋಕವಿರುದ್ಧಕೃತ್ಯಗಳುಳ್ಳ ರುದ್ರನನ್ನೇಕೆ ವರ್ಣಿಸುವೆ? ಲೋಕದಲ್ಲಿ ಕಣ್ಣುಗಳನ್ನು ತಂಪಾಗಿಟ್ಟುಕೊಳ್ಳುವದಕ್ಕೆ ಯತ್ನಿಸುತ್ತಿರುವ ಜನರನ್ನು ಮಾತ್ರ ಬಲ್ಲೆವು. ಈ ರುದ್ರನಾದರೋ ಕಣ್ಣಿನಲ್ಲಿ ಬೆಂಕಿಯನ್ನೇ ಇಟ್ಟುಕೊಂಡಿರುವನು!

ವಿಶ್ವಾವಸು—ಇದರ ರಹಸ್ಯವನ್ನು ಹೇಳುವೆನು. ಸಾವಧಾನವಾಗಿ ಕೇಳು. ಗಂಗಾನದಿಯ ಸಂಬಂಧದಿಂದ ಚಂದ್ರನಿಗೂ, ಚಂದ್ರನ ಸಂಬಂಧದಿಂದ ಗಂಗಾನದಿಗೂ ಉಂಟಾದ ಶೀತಬಾಧೆಯನ್ನು ಶಮನಮಾಡುವುದಕ್ಕೋಸ್ಕರ ಅಗ್ನಿಮಯವಾದ ಮೂರನೆಯ ಕಣ್ಣನ್ನು ಬೆಂಕಿಯ ಕಿಡಿಗಳಿಂದ ತುಂಬಿರುವ ಕುಂಪಟಿಯಂತೆ ಧರಿಸಿರುವನು. ಆಶ್ಚರ್ಯ!

ಕೃಶಾನು—ಅತಿಶೀತಲವಾದ ಗಂಗೋದಕದಿಂದಲೂ, ಚಂದ್ರನ ಕಿರಣಗಳಿಂದಲೂ ತಣ್ಣಗಿರುವ ತಲೆಯುಳ್ಳ ಈಶ್ವರನಿಗೆ ಅಭಿಷೇಕದಲ್ಲಿಷ್ಟು ಆಸಕ್ತಿಯೇತಕ್ಕೆ?

ಮೂಢರಾದ ಜನರು ಚಂದ್ರನ ಸುಧಾಮಯವಾದ ಕಿರಣಗಳಿಂದಲೂ, ತಣ್ಣಗಿರುವ ಗಂಗಾತರಂಗಗಳಿಂದಲೂ ನನೆಯುತ್ತಿರುವ ಜಟಾಜೂಟವುಳ್ಳ ಈಶ್ವರನಿಗೆ ವ್ಯರ್ಥವಾಗಿ

ಅಭಿಷೇಕವನ್ನು ಮಾಡುತ್ತಾರೆ. ಚೆನ್ನಾಗಿ ನೀರನ್ನು ಕುಡಿದು ಬಾಯಾರಿಕೆಯನ್ನು ಆರಿಸಿಕೊಂಡಿರುವವನಿಗೆ ಯಾವ ಮೂರ್ಖನಾದರೂ ಮರಳಿ ನೀರನ್ನು ಕೊಡುವನೆ?

ವಿಶ್ವಾವಸು—ಇದಕ್ಕೂ ಕೂಡ ಯುಕ್ತವಾದ ಸಮಾಧಾನವನ್ನು ಹೇಳುವೆನು ಕೇಳು.

ಲಲಾಟನೇತ್ರಾಗ್ನಿಯ ಸಂಬಂಧದಿಂದಲೂ, ಕಾಲಕೂಟವನ್ನು ಕುಡಿದುದರಿಂದಲೂ, ವಿಷಜಂತುಗಳಾದ ಸರ್ಪಗಳನ್ನು ಧರಿಸಿರುವದರಿಂದಲೂ, ಗಂಗಾನದಿಯನ್ನು ಧರಿಸಿದ್ದರೂ ಈಶ್ವರನಿಗೆ ಅಭಿಷೇಕದಲ್ಲಿ ಆಸಕ್ತಿಯು ಹೆಚ್ಚಾಗಿರುವುದು.

ಕೃಶಾನು—ಇರಲಿ. ಕೃಶಾಂಗನಾದ ಚಂದ್ರನು ಆಕಾಶವನ್ನು ಬಿಟ್ಟು ಈಶ್ವರನ ತಲೆಯಮೇಲೆ ಗಂಗಾನದಿಯ ಅಲೆಯ ಮಧ್ಯದಲ್ಲಿಯೇ ಯಾವಾಗಲೂ ಇರುತ್ತಾನೆ. ಇದರ ರಹಸ್ಯವೇನು?

ವಿಶ್ವಾವಸು—ಕೃಶಾಂಗನಾದ ಚಂದ್ರನು 'ನಾನು ಸಮುದ್ರರಾಜನ ಮಗನು' ಎಂದು ಎಲ್ಲರಿಗೂ ತಿಳಿಸಲೋಸುಗ ಈಶ್ವರನ ತಲೆಯಮೇಲೆ ಸಮುದ್ರರಾಜನ ಪಟ್ಟದರಾಣಿಯಾದ ಗಂಗಾನದಿಯ ಗರ್ಭದಲ್ಲಿ ಇದಾನೆ.

ಕೃಶಾನು—ಹೇಗಾದರೂ, ಲೋಭಿಯಾದ, ಕಿರಾತತುಲ್ಯನಾದ ಈಶ್ವರನನ್ನು ಫಲಾಪೇಕ್ಷಿಗಳೆಂದಿಗೂ ಆದರಿಸಬಾರದು. ರುದ್ರನು ಸೂಕ್ಷ್ಮವಾದ ಮತ್ತು ಶ್ವೇತವಾದ ಬಟ್ಟೆಗಳುಳ್ಳವನಾದರೂ ವಸ್ತ್ರಹೀನನಾಗಿ ದಿಗಂಬರನಾಗಿರುವನು. ಸುವರ್ಣನಿಧಿಯಾದ ಮೇರುಪರ್ವತವಲ್ಲಿದ್ದರೂ ಕಬ್ಬಿಣದಲ್ಲಿ ಮಾಡಲ್ಪಟ್ಟ ಶೂಲವನ್ನು ಧರಿಸಿರುವನು. ಇವನಿಗಿಂತಲೂ ಲೋಭಿಯುಂಟೆ?

ಈಶ್ವರನ ಸಂಬಂಧದಿಂದ ಜೀವನದಾಯಿನಿಯಾದ ಗಂಗಾನದಿಯೂ ಕೂಡ ಲೋಭಕ್ಕೆ ಒಳಗಾಗಿದೆ. ವಿಷ್ಣುವಿನ ಪಾದಕಮಲದಲ್ಲಿ ಹುಟ್ಟಿದರೂ, ಸಂಸಾರವಿಮುಖರಿಂದ ಆಶ್ರಯಿಸಲ್ಪಟ್ಟರೂ, ಅನವರತವೂ ಸಮುದ್ರದೊಡನೆ ಕಲಿತಿದ್ದರೂ ಈಶ್ವರನ ಶಿರಃಸಂಬಂಧವನ್ನು ಮಾತ್ರ ಎಂದಿಗೂ ಅಗಲಿರಲಾರದು. ಸರ್ವತೋಮುಖಪೌಂಡರೀಕಾದಿಕ್ರತುವಿಶೇಷಸಂಸ್ಕಾರವುಳ್ಳದುದಾದರೂ ಗಂಗಾನದಿಯು ಜಹ್ನುಮುನಿಯ ಯಜ್ಞವನ್ನು ನಾಶಮಾಡಿತು. ದಕ್ಷಯಜ್ಞವಿನಾಶಕನಾದ ರುದ್ರನ ಸಹವಾಸದೋಷದಿಂದಲೇ ಗಂಗಾನದಿಗೆ ಈ ದುಷ್ಟತ್ವವು ಉಂಟಾಯಿತು. ಹಸ್ತದಲ್ಲಿ ಕನಕಾಚಲವನ್ನು ಧರಿಸಿರುವವನಾದರೂ, ಧನಪತಿಯಾದ ಕುಬೇರನಿಗೆ ಮಿತ್ರನಾದರೂ, ಬೆಳ್ಳಿಯಬೆಟ್ಟದಮೇಲೆ ಕುಳಿತಿದ್ದರೂ ಭಿಕ್ಷಾಟನೆಯು ಮಾತ್ರ ಇವನಿಗೆ ತಪ್ಪಲಿಲ್ಲ. ತಿರುಪವನ್ನೆತ್ತುವುದು ಈ ರುದ್ರನ ಹಣೆಬರಹವಾಗಿದ್ದರೆ ಲಕ್ಷ್ಮಿಯು ಹೇಗೆತಾನೆ ಇವನನ್ನು ವರಿಸುವಳು? ಇಂತಹ ನಿರ್ಭಾಗ್ಯನನ್ನು ಎಂದಿಗೂ ಸ್ತುತಿಸಬಾರದು. ತಲೆಯಲ್ಲಿ ಚಂದ್ರತೇಜಸ್ಸನ್ನೂ, ಫಾಲತಲದಲ್ಲಿ ಅಗ್ನಿತೇಜಸ್ಸನ್ನೂ, ಶರೀರದಲ್ಲಿ ಸರ್ಪಶಿರಸ್ಸುಗಳಲ್ಲಿರುವ ಮಣಿಗಳ ಕಾಂತಿಯನ್ನೂ ಧರಿಸಿದ್ದರೂ ಕತ್ತಲೆಯಲ್ಲಿ ಬಿದ್ದಿರುವುದು ('ಅಂಧಕಾರಿತ್ವ' ಎಂದರೆ ಅಂಧಕಾಸುರನಿಗೆ 'ಶತ್ರುತ್ವ' ಎಂದು ಪರಿಹಾರ) ಇವನಿಗೆ ತಪ್ಪಲಿಲ್ಲ.

ವಿಶ್ವಾವಸು—ಮಿತ್ರನೆ! ಶ್ಲೇಷಪ್ರಚುರವಾದ ವಾಕ್ಯಗಳಿಂದ ಈಶ್ವರನನ್ನು ದೂಷಿಸಿ ಫಲವೇನು? ಸ್ತುತ್ಯರ್ಹವಾದ ಪರಮೇಶ್ವರನ ದಾತೃತ್ವವನ್ನು ವರ್ಣಿಸುವೆನು ಕೇಳು.

ಪ್ರಸಿದ್ಧನಾದ ಮಾರ್ಕಂಡೇಯಮುನಿಗೆ ಚಿರಂಜೀವಿತ್ವ ವನ್ನೂ, ರಾಜರ್ಷಿಯಾದ ಭಗೀರಥನಿಗೆ ಇಷ್ಟಾರ್ಥಭೂತ ವಾದ ಗಂಗಾನದಿಯನ್ನೂ, ಬಾಣರಾವಣಾದಿದಾನವರಿಗೆಲ್ಲಾ ಅವರು ಕೋರಿದುದನ್ನೂ ಕೊಟ್ಟನು. ಆದಕಾರಣ ಜಗ ದಾನಂದಕರವಾದ ಈಶ್ವರನ ದಾತೃತ್ವವನ್ನು ನೋಡು.

ಕೃಶಾನು;—ಈಶ್ವರನ ದಾತೃತ್ವವು ಜಗದಾನಂದಕರ ವೆಂಬುದು ಸುಳ್ಳುಮಾತು. ದಾನವರಿಗೂ ರಾಕ್ಷಸರಿಗೂ ಇಷ್ಟಾರ್ಥಗಳನ್ನು ಕೊಟ್ಟು ತನಗೂ ಜಗತ್ತಿಗೂ ದುಃಖವ ನ್ನುಂಟುಮಾಡಿದ ಈಶ್ವರನ ದಾತೃತ್ವವು ನಿನಗೇ ಮನೋ ಹರವು.

ವಿಶ್ವಾವಸು:—ಕುಟಿಲ ಬುದ್ಧಿಯೇ! ಗುಣವನ್ನೂ ದೋಷವೆಂದು ಭಾವಿಸುತ್ತೀಯೆ. ಪರಮೇಶ್ವರನು ದೈತ್ಯ ರಿಗೆ ವರಗಳನ್ನು ಕೊಡದೆಇದ್ದಿದ್ದರೆ ಅವರು ಬಾರಿಬಾರಿಗೂ ಲೋಕಗಳನ್ನು ಹಿಂಸಿಸಲು ಸಮರ್ಥರಾಗುತ್ತಿರಲಿಲ್ಲ. ಮಹಾವಿಷ್ಣುವಿನ ಮನಸ್ಸಿನಲ್ಲಿ ಕರುಣಾರಸವು ಉದಯಿಸು ತ್ತಿರಲಿಲ್ಲ. ಮತ್ತು ಆತನು ಮಾನುಷಾದಿಜಾತಿಗಳಲ್ಲಿ ಅವತರಿಸುತ್ತಿರಲಿಲ್ಲ. ರಾಮಸೇತು, ಭಗವದ್ಗೀತೆ ಮೊದ ಲಾದ ವಸ್ತುಗಳು ಲೋಕದಲ್ಲಿ ಆವಿರ್ಭವಿಸುತ್ತಿರಲಿಲ್ಲ. ಸಂಸಾರಸಾಗರದಲ್ಲಿ ಮುಳುಗಿ ನರಳುತ್ತಿದ್ದ ಮನುಷ್ಯರು ಮೋಕ್ಷವನ್ನು ಪಡೆಯುತ್ತಿರಲಿಲ್ಲ.

ಕಂಪಾನದಿಯ ತರಂಗಗಳಿಂದ ತಣ್ಣಗಿರುವ ಮಂದ ಮಾರುತದಿಂತೂಗುತ್ತಿರುವ ಮಾವಿನಮರಗಳಿಂದ ಸ್ರವಿಸುತ್ತಿ ರುವ ಮಕರಂದದಿಂದಭಿಷಿಕ್ತನಾದ, ಕರುಣಾರಸಸಾಗರ

ನಾದ ಏಕಾಮ್ರೇಶ್ವರನು ಭಕ್ತರಿಗೆ ನಿರತಿಶಯವಾದ ಸುಖವನ್ನೂ, ನಿರುಪಮವಾದ ಐಶ್ವರ್ಯವನ್ನೂ, ಕೀರ್ತಿಯನ್ನೂ ಕೊಡುತ್ತಿರುವನು.

ಕೃಶಾನು—ಪರಸ್ಪರವಿರುದ್ಧವಾದ ಸ್ವಭಾವವುಳ್ಳ ದೇವರಿಂದ ವ್ಯಾಪ್ತವಾದ ಈ ಕಾಂಚೀಪುರಿಯನ್ನು ಏತಕ್ಕೆ ಸ್ತುತಿಸುವೆ? ಈ ನಗರದಲ್ಲಿ ಪೂರ್ವದಿಕ್ಕಿನಲ್ಲಿ ಒಬ್ಬನೂ, ಪಶ್ಚಿಮದಿಕ್ಕಿನಲ್ಲಿ ಒಬ್ಬನೂ ಪ್ರಕಾಶಿಸುತ್ತಿರುವ ಇಬ್ಬರು ದೇವರು ಇದಾರೆ. ಇವರಲ್ಲಿ ಒಬ್ಬನಾದ ವರದರಾಜಸ್ವಾಮಿಯು ವಿನಾಯಕನನ್ನು (ಗರುಡನನ್ನು) ವಾಹನವನ್ನಾಗಿ ಉಪಯೋಗಿಸುತ್ತಿರುವನು. ಮತ್ತೊಬ್ಬನಾದ ಏಕಾಮ್ರೇಶ್ವರನು ಮಗನಾದ ವಿನಾಯಕನನ್ನು ಮುಂದೆ ಇಟ್ಟುಕೊಂಡಿರುವನು. ವರದರಾಜಸ್ವಾಮಿಯು ಯಾವಾಗಲೂ 'ಅನಷ್ಟಮೂರ್ತಿಯು' ಎಂದರೆ ನಾಶರಹಿತವಾದ ಸ್ವರೂಪವುಳ್ಳವನು. ಆದರೆ ಅಷ್ಟಮೂರ್ತಿಯಲ್ಲ. ಏಕಾಮ್ರೇಶ್ವರನಾದರೋ ಅಷ್ಟಮೂರ್ತಿ. ವರದರಾಜಸ್ವಾಮಿಯು 'ಗಜಾರ್ತಿಹರನು' ಎಂದರೆ ಗಜೇಂದ್ರನ ಬಾಧೆಯನ್ನು ತಪ್ಪಿಸಿದವನು. ಮತ್ತೊಬ್ಬನು (ಏಕಾಮ್ರೇಶ್ವರನು) 'ಅಗಜಾರ್ತಿಹರನು' ಎಂದರೆ ಗಜಾರ್ತಿಹರನಲ್ಲ. ಆದರೆ ಅಗಜೆಯಾದ ಗೌರಿಯ ಕಾಮಬಾಧೆಯನ್ನು ಶಮನಮಾಡಿದವನು. ಇನ್ನೂ ಚೆನ್ನಾಗಿ ಕೇಳು.—ಒಬ್ಬನು (ವರದರಾಜಸ್ವಾಮಿಯು) ದ್ವಿಜರಾಜನನ್ನು (ಗರುಡನನ್ನು) ತಿರಸ್ಕರಿಸುತ್ತಾನೆ. ಮತ್ತೊಬ್ಬನು (ಏಕಾಮ್ರೇಶ್ವರನು) ದ್ವಿಜರಾಜನನ್ನು (ಚಂದ್ರನನ್ನು) ತಲೆಯಲ್ಲಿ ಧರಿಸಿದಾನೆ. ಒಬ್ಬನು (ವರದರಾ

ಜಸ್ವಾಮಿಯು) ದೇವಲೋಕವನ್ನು ಪವಿತ್ರಮಾಡಿದ ಗಂಗಾನದಿಯನ್ನು ಪಾದಗಳಲ್ಲಿ ಧರಿಸಿದಾನೆ. ಮತ್ತೊಬ್ಬನು (ಏಕಾಮ್ರೇಶ್ವರನು) ಅದೇ ಗಂಗಾನದಿಯನ್ನು ತಲೆಯಲ್ಲಿ ಧರಿಸಿದಾನೆ. ಆಶ್ಚರ್ಯ !

ಪರಸ್ಪರವಿರುದ್ಧದೇವತೆಗಳಿಂದ ವ್ಯಾಪ್ತವಾದ ಕಾಂಚೀಪುರಿಯು ಸಂಬಂಧದಿಂದ ಹಸ್ತಿಶೈಲವೂ ಕೂಡ ಹೀಗೆಯೇ ವಿರುದ್ಧದೇವತೆಗಳಿಂದ ವ್ಯಾಪ್ತವಾಗಿ ದೂಷಣೀಯವಾಗಿದೆ.

ಅಶ್ವಮೇಧಕ್ರತುಕಾಲದಲ್ಲಿ ಹಿರಣ್ಯಗರ್ಭನನ್ನು (ಬ್ರಹ್ಮನನ್ನು) ಸಂರಕ್ಷಿಸಿದವನೂ, ನರಸಿಂಹಾವತಾರದಲ್ಲಿ ಹಿರಣ್ಯಗರ್ಭನನ್ನು (ಹಿರಣ್ಯಕಶಿಪುವನ್ನು) ಸಂಹರಿಸಿದವನೂ ವಿಷ್ಣುವೇ. ಆನೆಗೆ ಭಯವನ್ನುಂಟುಮಾಡಿದವನೂ, ಭಯನಿವಾರಣೆಯಂ ಮಾಡಿದವನೂ ವಿಷ್ಣುವೇ. ಹೀಗೆ ವಿರುದ್ಧವ್ಯಾಪಾರವುಳ್ಳ ಹರಿಯು ಹಸ್ತಿಶೈಲದಮೂಲದಲ್ಲಿಯೂ ಶಿಖರದಲ್ಲಿಯೂ ಪ್ರಕಾಶಿಸುತ್ತಿರುವನು.

ವಿಶ್ವಾವಸು—ಎಲೈ ಸಖನೆ! ಕಾಂಚೀನಗರಿಯು ವೈಷ್ಣವೀ, ಶೈವೀ, ಎಂದು ಎರಡು ವಿಧವು. ಈ ಎರಡು ಭಾಗಗಳಲ್ಲಿಯೂ ಒಂದೇ ದೈವತವು ಎರಡು ಬಗೆಯಾಗಿ ಕಾಣುತ್ತಿರುವುದು. ಪ್ರಥಮ ಭಾಗದಲ್ಲಿ ಎಂದರೆ ವೈಷ್ಣವೀಕಾಂಚಿಯಲ್ಲಿ ವರದ, ರಾಮಕೃಷ್ಣ ಮೊದಲಾದ ಹೆಸರುಗಳುಳ್ಳ ಶ್ರೀಮನ್ಮಹಾವಿಷ್ಣುವು ಅನಂತಸರೋವರದಲ್ಲಿಯೂ, ಹಸ್ತಿಶೈಲದಶಿಖರದಲ್ಲಿಯೂ ಪ್ರಕಾಶಿಸುತ್ತಿರುವನು. ಎರಡನೆಯ ಭಾಗದಲ್ಲಿ ಎಂದರೆ—ಶೈವೀಕಾಂಚಿಯಲ್ಲಿ

ಸರ್ಪಗಳೆಂಬ ಹಾರಗಳಿಂದ ಅಲಂಕೃತವಾದ ಶರೀರದಿಂದ ಲೂ, ಸುಧಾಕರನೆಂಬ 'ಕಿರೀಟದಿಂದೊಪ್ಪುತ್ತಿರುವ ಶಿರಸ್ಸಿನಿಂದಲೂ ಪ್ರಕಾಶಿಸುತ್ತಿರುವ ಭವ, ಹರ, ಶಿವ ಎಂಬ ಸಂಜ್ಞೆಗಳುಳ್ಳ ಏಕಾಮ್ರೇಶ್ವರನು ಸರ್ವೋತ್ಕರ್ಷದಿಂದ ಮೆರೆಯುತ್ತಿರುವನು.

ಅಸುರವಿಲಾಸಿನಿಯರಿಂದ ಸನ್ನುತನಾಗಿಯೂ, ನಾರದಾದಿಮುನಿವರರಿಂದ ಧ್ಯಾನಿಸಲ್ಪಟ್ಟವನಾಗಿಯೂ, ಮಹಾಭಾರತದಲ್ಲಿ ಪಾಂಡವದೂತನೆಂದು ಪ್ರಸಿದ್ಧನಾದ ಶ್ರೀಕೃಷ್ಣಮೂರ್ತಿಯು ಇಲ್ಲಿ ಸರ್ವಸುಲಭನಾಗಿ ದರ್ಶನವನ್ನೀಯುತ್ತಿರುವನು.

ಕೃಶಾನು—ಅಯುಕ್ತವ್ಯಾಪಾರಗಳನ್ನು ಮಾಡಿರುವ ಕೃಷ್ಣನನ್ನು ಹೊಗಳಬೇಡ. ಸಕಲಜಗತ್ತುಗಳಿಗೊಡೆಯನಾದರೂ, ಅಣಿಮಾದ್ಯಷ್ಟೈಶ್ವರ್ಯಗಳಿಗೆ ಸ್ಥಾನವಾದರೂ, ರಾಜ್ಯಕೋಶಾದಿಗಳನ್ನು ಕಳೆದುಕೊಂಡು ಅರಣ್ಯದಲ್ಲಿ ಅತಿದರಿದ್ರರಾಗಿ ತಿರುಕರಂತೆ ಕಷ್ಟಪಡುತ್ತಿದ್ದ ಪಾಂಡವರಿಗೆ ದೂತನಾದನು. ತೇಜೋನಿಧಿಯಾದ ಸೂರ್ಯನು ಮಿಣುಕುಹುಳದ ಮರಿಯ ಮನೆಯಲ್ಲಿ ದಾಸಾನುದಾಸನಾಗಿ ಅದನ್ನು ಉಪಚರಿಸುವದೆಂದರೇನು? ಇದು ಯಾರಿಗಾದರೂ ಸಮ್ಮತವೆ?

ವಿಶ್ವಾವಸು— "ಅಲಂಕರೋತಿಯಃಶ್ಲೋಕಂಶುಕ ಏವನಮಧ್ಯಮಃ। ನಾಲಂಕರೋತಿ ಯಃಶ್ಲೋಕಂಶುಕಏವ ನಮಧ್ಯಮಃ"॥ ಎಂದರೆ ಶ್ಲೋಕವನ್ನು ಗುಣಾಲಂಕಾರ ಸಹಿತವಾಗಿ ಶ್ರಾವಕರಿಗೆ ಇಂಪಾಗಿರುವಂತೆ ರಚಿಸುವವನು

ಶುಕಮಹರ್ಷಿಯಂತೆ ಪೂಜ್ಯನೇ ಹೊರತು ನಿಂದ್ಯನಲ್ಲ. ಆದ ರೆ ಅಲಂಕಾರವೂ, ಲಾಲಿತ್ಯವೂ, ಮೊದಲಾದ ಗುಣಗಳಿಲ್ಲದೆ ಶ್ಲೋಕವನ್ನು ರಚಿಸುವವನು 'ಶುಕ' ಎಂಬ ಪದದ ಮಧ್ಯದಲ್ಲಿ 'ನ' ಕಾರ ಬಂದರೆ 'ಶುನಕ' ಎಂದರೆ ನಾಯಿಗೆ ಸಮವೆಂದು ಹೇಳಿರುವದರಿಂದ ಕಾವ್ಯರಚನೆಗೆ ಗುಣಾಲಂ ಕಾರವಿಶಿಷ್ಟತ್ವವೂ, ತನ್ಮೂಲಕ ಗಾಂಭೀರ್ಯವೂ ಭೂಷಣ ವು; ಐಶ್ವರ್ಯಕ್ಕೆ ದಾತೃತ್ವವೇ ಭೂಷಣವು; ಪ್ರಭುತ್ವಕ್ಕೆ ವೀರ್ಯಧೈರ್ಯಶೌರ್ಯಗಳೇ ಭೂಷಣಗಳು: ಗುರುತ್ವ ಕ್ಕೆ ವಿದ್ಯೆಯೇ ಭೂಷಣವು; ಸತ್ಕುಲಪ್ರಸೂತನಿಗೆ ಸದಾಚಾ ರವೇ ಭೂಷಣವು; ಮಹಾತ್ಮರಾದುದಕ್ಕೆ ಸರ್ವಸುಲಭನಾ ಗಿ ಸಂಚರಿಸುವದೇ ಭೂಷಣವೆಂದು ನುಡಿದು ವಿಮಾನದಲ್ಲಿ ಮುಂದಕ್ಕೆ ಪ್ರಯಾಣಮಾಡಿ ಕೃಶಾನುವನ್ನು ಕುರಿತು ಹೇಳ ಲಾರಂಭಿಸಿದನದೆಂತೆಂದರೆ:—

ಗೃಧ್ರಸರೋವರದ ಸಮೀಪದಲ್ಲಿ ವಿಜಯರಾಘವ ಸ್ವಾಮಿಯು ಶ್ವೇತಪದ್ಮಕ್ಕಿಂತಲೂ ಬಿಳುಪಾದ ನಯನಗ ಳಿಂದ ಶೋಭಿತನಾಗಿ, ಪುತ್ರಾರ್ಥವಾಗಿ ಅನೇಕ ತರುಣಿಯ ರಿಂದ ಸೇವಿತನಾಗಿ ಪ್ರಕಾಶಿಸುತ್ತಿರುವನು.

ಕೃಶಾನು.—ತನ್ನ ಮಹಿಮೆಗೆ ಅನನುರೂಪವಾದ ಅವ ತಾರವನ್ನು ಧರಿಸಿರುವ ವಿಜಯರಾಘವನನ್ನೇಕೆ ಸ್ತುತಿಸುವೆ? ಶುಕಮಹಾಯೋಗಿಗಳಿಂದಲೂ, ಬ್ರಹ್ಮಕುಮಾರಾದಿದೇವಗ ಣದಿಂದಲೂ ವರ್ಣಿಸಲ್ಪಟ್ಟ ಗುಣವೈಭವವುಳ್ಳವನಾದರೂ, ಕ್ಷೀರಸಾಗರಶಾಯಿಯಾದರೂ ಗೃಧ್ರಸರೋವರದ ಸಮೀ ಪದಲ್ಲಿ ವಾಸಿಸುತ್ತಾನೆ. ಇದು ಎಷ್ಟು ನೀಚವಾದ ಕೃತ್ಯ?

ವಿಶ್ವಾವಸು—ಸಖನೆ! ಹೀಗೆ ನುಡಿಯಬೇಡ. ಗೃಧ್ರ ಸರೋವರದಲ್ಲಿ ವಾಸಿಸುವುದು ವಿಜಯರಾಘವಸ್ವಾಮಿಗೆ ಭೂಷಣವೆಂದು ತಿಳಿ.

ಅಜ್ಞಾನಿಗಳಿಗೆ ದೂರನಾಗಿ, ಯಾವಾಗಲೂ ಮಂಗಳ ಕರವಾದ ಕೇವಲಸುಖಸ್ಥಾನವಾದ ವೈಕುಂಠದಲ್ಲಿ ನಾರ ದಾದಿಮಹರ್ಷಿಗಳಿಂದ ಪೂಜಿತನಾದ ಪರಮದಯಾಳುವಾದ ಸಾಕ್ಷಾನ್ನಾರಾಯಣನು ಭಕ್ತಪರಾಧೀನನಾದುದರಿಂದ ಎಲ್ಲ ರಿಗೂ ನಿರಾಯಾಸವಾಗಿ ದರ್ಶನವನ್ನಿತ್ತು ಧನ್ಯರನ್ನಾಗಿಮಾಡ ಲು ಈ ಗೃಧ್ರಸರೋವರದ ಸಮೀಪದಲ್ಲಿ ಅವತರಿಸಿದನು; ಎಂದು ನುಡಿದು ದಕ್ಷಿಣಕ್ಕೆ ಹೊರಟು ಸಂತೋಷಭರಿತ ನಾಗಿ ಹೇಳಿದನು. 'ಗಂಗಾಯಮುನಾಸರಸ್ವತೀ ಇವೇ ಮೊದಲಾದ ಪುಣ್ಯತೀರ್ಥಗಳಹಾಗೆ ಪಾಪರಾಶಿಗಳೆಂಬ ಕೆಂಡ ಗಳನ್ನಾರಿಸುವದಾಗಿಯೂ, ಶೋಕಪರಂಪರೆಯನ್ನು ಕತ್ತರಿ ಸಿ ಮನುಷ್ಯರಿಗೆ ಶಾಂತಿಯನ್ನೂ, ಆನಂದವನ್ನೂ ಉಂಟು ಮಾಡುವದಾಗಿಯೂ, ಸ್ನಾನಾರ್ಥವಾಗಿ ಬರುವ ಅನೇಕ ಪಂಡಿತರಿಂದ ನಿತ್ಯವೂ ಸೇವಿಸಲ್ಪಡುವದಾಗಿಯೂ, ಮೂಢ ರಿಗೆ ಬುದ್ಧಿಮಾಂದ್ಯವನ್ನು ನಾಶಮಾಡಿ ವಿವೇಕವನ್ನುಂಟು ಮಾಡುವದಾಗಿಯೂ ಇರುವ 'ಕ್ಷೀರನದೀ' ಎಂಬ ಪುಣ್ಯ ತೀರ್ಥವು ನನ್ನ ಪಾಪಜಾಲವನ್ನು ನಿಶ್ಶೇಷವಾಗಿ ನಾಶಮಾ ಡಲಿ ಎಂದು ಹೇಳಿದನು.

ಕೃಶಾನು—ಇಷ್ಟು ಗುಣಯುಕ್ತವಾದರೂ ಕ್ಷೀರನದಿ ಯ ನೀರು ಪಾನಾರ್ಹವಲ್ಲ. ಎಳ್ಳಷ್ಟು ಕಲ್ಮಷವಿಲ್ಲದಿದ್ದ ರೂ, ಮಧುರವಾದರೂ, ಲವಣಸಮುದ್ರದ ಸಂಬಂಧದಿಂದ ಕ್ಷೀರನದಿಯನೀರು ಸತ್ಪುರುಷರಿಗೆ ಇಂಪಾಗಿಲ್ಲ.

ವಿಶ್ವಾವಸು—ಗುಣವನ್ನುದೋಷವೆಂದು ಎಣಿಸುತ್ತೀ ಯೆ. 'ಸಮುದ್ರಗಾನದೀಸ್ನಾನಂ ನರಾಣಾಂ ಶುದ್ಧಿಬುದ್ಧಿದಮ್' ಎಂದು ಶಾಸ್ತ್ರವು ಸಾರುತ್ತಿರುವದರಿಂದ ಸಮುದ್ರ ಸಂಬಂಧವುಳ್ಳ ನದಿಯಲ್ಲಿ ಮುಳುಗಿದರೆ ಜನರು ಪಾಪರಹಿತ ರಾಗುವರು. ಕಾಯಶುದ್ಧಿಯೂ, ಮನಶ್ಶುದ್ಧಿಯೂ ಉಂ ಟಾಗುವುವು. ಬುದ್ಧಿಯು ನಿರ್ಮಲವಾಗುವುದು. ಇವುಗ ಳೆಲ್ಲಾ ಗುಣಗಳೋ ದೋಷಗಳೋ ನೀನೇ ಯೋಚಿಸುವ ನಾಗು. ಈ ಕ್ಷೀರನದಿಯಂತೆ ಮನುಷ್ಯರಿಗೆ ಹಿತವನ್ನುಂ ಟುಮಾಡುವ ಬಾಹಾನದಿಯನ್ನು ನೋಡು. ಈ ನದಿಯ ಉತ್ತರತೀರದಲ್ಲಿ ವೈದಿಕಶಿಖಾಮಣಿಗಳ ವಾಸಕ್ಕೆ ಅನು ಕೂಲವಾದ, ತೃಣಕಾಷ್ಠಸಮೃದ್ಧ್ಯಾದಿಸಕಲಗುಣಯುಕ್ತ ವಾದ ಒಂದು ಅಗ್ರಹಾರವಿರುವುದು. ನಿರತಿಶಯಪ್ರಕಾಶ ದಿಂದೊಪ್ಪುತ್ತಿರುವ ಭ್ರಮರಗಳಕರ್ಣಾನಂದಕರವಾದ ಝುಂಕಾರಗಳಿಂದಮುಖರಿತವಾದ ಬಾಹಾನದೀತೀರದಲ್ಲಿ ಶೋಭಿಸುತ್ತಿರುವ ಮರಗಳಿಂದ ಸ್ರವಿಸುತ್ತಿರುವ ಮಕರಂ ದಬಿಂದುಗಳಿಂದ ತುಂಬಿದ ನೀರುಳ್ಳ ಕಾಲಿವೆಗಳಿಂದ ನಿಬಿಡ ವಾದ, ಆತ್ರೇಯಗೋತ್ರೋತ್ಪನ್ನರಾದ ಬ್ರಾಹ್ಮಣಶ್ರೇಷ್ಠ ರು ಮಾಡಿದ ಯಾಗಗಳಲ್ಲಿ ಸಮರ್ಪಿಸಲ್ಪಟ್ಟ ಪುರೋಡಾಶ ವಪಾದಿಹವಿರ್ಭಾಗಗಳ ಗಂಧದಸಂಪರ್ಕದಿಂದ ಮಂಗಳಕರ ವಾದ, ಸರ್ವಮನೋರಮವಾದ 'ಅರಶಾಣಿಪಾಲ' ಎಂಬ ಅಗ್ರಹಾರವು ಸರ್ವೋತ್ಕರ್ಷದಿಂ ಪ್ರಕಾಶಿಸುತ್ತಿರುವುದು. ಯಜ್ಞಕಾಲಗಳಲ್ಲಿ ವಿಪ್ರೋತ್ತಮರು ಪ್ರತಿಷ್ಠಿಸಿದ ಯೂಪ ಸ್ತಂಭಗಳಿಂದ ಅಲಂಕೃತವಾದ ಈ 'ಅರಶಾಣಿಪಾಲ' ಎಂಬ

ಅಗ್ರಹಾರವು ಪೂರ್ವದಲ್ಲಿ ರಘುನಾಥಕವಿಯೆಂಬ ಬ್ರಾಹ್ಮಣನಿಂದ ಸಂರಕ್ಷಿಸಲ್ಪಡುತ್ತಿದ್ದಿತು. ಸಾಕೇತನಗರಕ್ಕೆ ಸಮಾನವಾದ ಈ ಅಗ್ರಹಾರದಲ್ಲಿ ಪೂರ್ವೋಕ್ತರಘುನಾಥಕವಿಯ ಪುತ್ರನಾದ, ಈ ನಮ್ಮ ಕರ್ಣಾಟಕಪ್ರಬಂಧದ ಮೂಲಗ್ರಂಥವನ್ನುಬರೆದ 'ವೇಂಕಟಾಧ್ವರೀ' ಎಂಬ ಕವಿರಾಜನು ಪ್ರಕಾಶಿಸುತ್ತಿದ್ದನು. ಈ ಅರಶಾಣಿಪಾಲವೆಂಬ ಅಗ್ರಹಾರದ ಸಮೀಪದಲ್ಲಿರುವ, ಅನೇಕಪುಣ್ಯತೀರ್ಥಗಳಿಂದ ನಿಬಿಡವಾದ, ವೇದಶಾಸ್ತ್ರಪಾರಂಗತರಾದ ಭೂಸುರೋತ್ತಮರಿಂದನುಷ್ಠಿಸಲ್ಪಟ್ಟ ಕ್ರತುಗಳ ಯೂಪಸ್ತಂಭಾದಿಚಿಹ್ನೆಗಳಿಂದೊಪ್ಪುತ್ತಿರುವ 'ತುಂಡೀರಮಂಡಲ' ಅಥವಾ 'ತೊಂಡಮನಾಡು' ಎಂಬ ದೇಶವನ್ನು ನೋಡೆಂದು ನುಡಿದ ವಿಶ್ವಾವಸುವನ್ನು ಕುರಿತು ದೋಷೈಕಗ್ರಾಹಿಯಾದ ಕೃಶಾನುವಿಂತೆಂದನು:—

ಎಲೈ ಸಖನೆ! ಕಲಿಯುಗದಲ್ಲಿ ಯಜ್ಞಮಾಡುವುದೆಂದರೇನು? ಮಂತ್ರಮಂತ್ರಾರ್ಥಜ್ಞರಾದ ಋತ್ವಿಕ್ಕುಗಳೇ ಇಲ್ಲ. ಯಜಮಾನನಿಗೆ ನಿರ್ದೋಷವಾಗಿ ಕರ್ಮವನ್ನು ನೆರವೇರಿಸುವ ಕುಶಲತೆಯೇ ಇಲ್ಲ. ನಿಷ್ಕಲ್ಮಷವಾದ ದ್ರವ್ಯವಿಲ್ಲ. ಯಜ್ಞಮಾಡುವವನಿಗೆ ಕಾಮಾದಿದೋಷರಾಹಿತ್ಯವೆಂಬ ಹೃದಯಶುದ್ಧಿಯೇ ಇಲ್ಲ. ಇದೂ ಅಲ್ಲದೆ ಕಲಿಕಾಲದ ಸೋಮಯಾಜಿಗಳು ಅಲ್ಪಧನರು; ಅತಿಲುಬ್ಧರು; ಆದರೆ ಕ್ರತುಗಳನ್ನು ಮಾಡಿ ಖ್ಯಾತಿಯನ್ನು ಪಡೆಯಬೇಕೆಂಬ ಕೋರಿಕೆಯಿಂದ ಯಥೇಷ್ಟವಾಗಿ ಖರ್ಚುಮಾಡಲು ಕಾರ್ಪಣ್ಯದಿಂದ ಬಾಧಿಸಲ್ಪಟ್ಟರೂ, ವ್ಯರ್ಥವಾಗಿ ಪಶುವಧೆಯನ್ನು ಮಾಡಿ

ಕುಂಡಲಗಳಂಧರಿಸಿ ಮೆರೆಯುತ್ತಿರುವರು. ಅಹಹಾ! ಇದೆ ಷ್ಟು ಶೋಚನೀಯವಾದ ವಿಷಯ! ಇಷ್ಟೇ ಅಲ್ಲ. ಈ ಕಲಿ ಕಾಲದ ಬ್ರಾಹ್ಮಣರು ಯಥಾಶಾಸ್ತ್ರವಾಗಿ ಪಾದಪ್ರಕ್ಷಾಳ ನಾದಿಶೌಚವಿಧಿಯನ್ನಾಚರಿಸುವ ಬಗೆಯನ್ನೇ ಅರಿಯರು. ಸ್ನಾನಾಚಮನಾದಿನಿಯಮವನ್ನು ಸ್ಮರಿಸುವುದಕ್ಕೂ ಶಕ್ತ ರಲ್ಲ. ಹೀಗಿರುವಲ್ಲಿ ಇವರಿಗೆ ಅಗ್ನಿಹೋತ್ರವೆಲ್ಲಿಯದು? ದರ್ಶಪೂರ್ಣಮಾಸಾದಿಗಳಲ್ಲಿ ಕರ್ಮಾನುಷ್ಠಾನವಾರ್ತೆಯೆ ಲ್ಲಿಯದು? ಅಗ್ನಿಷ್ಟೋಮಾದಿಕ್ರತುಗಳೆಲ್ಲಿಯವು? ಅಗ್ನಿಕಾ ರ್ಯಾದಿಹೋಮಕರ್ಮವೆಲ್ಲಿಯದು?

ವಿಶ್ವಾವಸು—ಎಲೈ ಮಂದಮತಿಯೆ! ಸಟೆಯನ್ನು ನು ಡಿಯಬೇಡ. ಶಿಷ್ಟರಿಂದ ಉಚಿತವಾದ ವಿತ್ತವನ್ನು ಪಡೆದು, ಶ್ರುತಿಸ್ಮೃತಿಗಳನ್ನು ಪಠಿಸಿ, ಶ್ರೌತಸ್ಮಾರ್ತಕಲ್ಪಸೂತ್ರಪಾ ರೀಣರಾದ, ಶ್ರದ್ಧಾಭಕ್ತಿಸಮೇತರಾದ, ಪರಿಶುದ್ಧರಾದ ಋತ್ವಿಕ್ಕುಗಳನ್ನು ಕೂಡಿಸಿ, ಭಗವತ್ಪ್ರೀತಿಯನ್ನು ಸಂಕ ಲ್ಪಿಸಿ, ಕ್ರತುಗಳನ್ನು ಆಚರಿಸುವ ವಿವೇಕಿಗಳಾದ, ಬ್ರಹ್ಮ ಪರಾಯಣರಾದ ಸತ್ಪುರುಷರು ಕಲಿಯುಗವನ್ನು ಕೃತಯು ಗವನ್ನಾಗಿ ಮಾಡುವರು. "ಯಜ್ಞಕ್ಕೆ ಯೋಗ್ಯವಾದ ಸಾ ಮಗ್ರೀಗಳು ನಮ್ಮಲ್ಲಿ ಇಲ್ಲ" ಎನ್ನುವ ಜನರು ದೇವತಾ ರ್ಚನೆಯನ್ನೂ ಮಾಡಬಾರದು. ಏತಕ್ಕೆಂದರೆ ಇತರ ಜನ ರಿಂದ ಕೊಡಲ್ಪಡದೆ ತಮ್ಮಲ್ಲಿಯೇ ಇರುವ ವಸ್ತುಗಳು ದೇವ ತಾರ್ಚನೆಗೆ ಯೋಗ್ಯವಲ್ಲ. ಹಾಗಾದರೆ ದೇವತಾರ್ಚನೆಗೆ ಉಪಯುಕ್ತವಾದ ದ್ರವ್ಯವನ್ನು ಇತರರ ಸಹಾಯದಿಂದ ಸಂಪಾದಿಸಬೇಕೆಂದು ಅರ್ಥವಾಗುವುದು. ಇತರರ ದ್ರವ್ಯ

ದಿಂದ ಈ ಕಲಿಕಾಲದ ಬ್ರಾಹ್ಮಣರು ಯಜ್ಞವನ್ನು ಮಾಡು ವರೆಂದು ನೀನು ಅವರನ್ನು ದೂಷಿಸಿ, ಯಜ್ಞಗಳನ್ನು ಮಾಡಬಾರದೆಂದು ಹೇಳಿದರೆ, ದೇವತಾರ್ಚನೆಯೂ ಒಂದು ಯಜ್ಞವಾದುದರಿಂದ ಇತರರಿಂದ ಕೊಡಲ್ಪಟ್ಟ ದ್ರವ್ಯಸಹಾಯದಿಂದ ಅದನ್ನೂ ಮಾಡಬಾರದು. ಆದಕಾರಣ ನೀನು ಯಜ್ಞಾನುಷ್ಠಾನವನ್ನು ನಿಷೇಧಿಸಿದರೆ ಯಜ್ಞಾಭಿನ್ನವಾದ ದೇವತಾರ್ಚನೆಯನ್ನೂ ನಿಷೇಧಿಸದಂತಾಯಿತು. ಆದರೆ ಸ್ವ ದ್ರವ್ಯಸಹಾಯದಿಂದ ಯಾವ ವಿಧವಾದ ಯಜ್ಞವನ್ನೂ ಮಾಡಬಾರದೆಂದು ಹೇಳಿರುವದರಿಂದ ನೀನು ಮಾಡಿದ ಆಕ್ಷೇಪಣೆಯು ಅಸಂಗತವು. ವೇದದಲ್ಲಿ ಒಂದೆಡೆಯಲ್ಲಿ ಪ್ರಾಣಿಹಿಂಸೆಯನ್ನು ಮಾಡಬಾರದೆಂದು ಸಾಧಾರಣವಾಗಿ ಹೇಳಿದೆ. ಮತ್ತೊಂದೆಡೆಯಲ್ಲಿ ಯಾಗಕ್ಕೋಸ್ಕರ ಪಶುವಧೆಯನ್ನು ಮಾಡಬಹುದೆಂದು ಹೇಳಿದೆ. ಆದುದರಿಂದ ವೈದಿಕನು ಯಜ್ಞ ಮಾಡುವ ಕಾಲದಲ್ಲಿ ಪಶುವಧೆಯನ್ನು ಏಕೆ ಮಾಡಬಾರದು? ರಾಮಾನುಜಾಚಾರ್ಯರೂಕೂಡ ಯಾಗಾರ್ಥವಾಗಿ ಪಶುವಧೆಯನ್ನು ಮಾಡುವುದು ಹಿಂಸೆಯಲ್ಲವೆಂದೂ, ಮಾಡಿದವನಿಗೆ ಪಾಪಲೇಶವೂ ಇಲ್ಲವೆಂದೂ ಹೇಳಿರುವರು. ಹೀಗಿರುವಲ್ಲಿ ಆ ರಾಮಾನುಜಮತಾನುಸಾರಿಗಳೇ ಪಶುಸಹಿತವಾದ ಯಜ್ಞವನ್ನು ಮಾಡದಿದ್ದರೆ ಅವರಿಗಿಂತಲೂ ನೀಚರಾದ ಗುರುದ್ವೇಷಿಗಳು ಯಾರು? ಇನ್ನೂ ಸಾವಧಾನವಾಗಿ ಕೇಳು. ಜೈನಭಿನ್ನರಾದ ಜನರು ಯಜ್ಞಭಿನ್ನವಾದ ಕರ್ಮಗಳಲ್ಲಿ ಪಶುವಧೆಯನ್ನು ನಿಷೇಧಿಸುವ ಹಾಗೆ ಯಜ್ಞದಲ್ಲಿಯೂ ನಿಷೇಧಿಸಿದರೆ ಪರಸ್ತ್ರೀಸಂಗಮವನ್ನು ನಿಂದಿಸುವಂತೆ ಸ್ವಕಳತ್ರ ಸಂಗಮವನ್ನೂ ಏತಕ್ಕೆ ನಿಂದಿಸುವದಿಲ್ಲ?

ತೆಂಗಲರೆಂಬ ಕೆಲಜನರು ಕಲಿಯುಗದಲ್ಲಿ ಪರಿಶುದ್ಧರಾದ ಋತ್ವಿಕ್ಕುಗಳು ವಿರಳರೆಂಬ ವ್ಯಾಜದಿಂದ ನಿತ್ಯಕ್ರತುಗಳನ್ನು ಬಿಡುವುದಾದರೆ ಪರಿಶುದ್ಧನಾದ ಆಚಾರ್ಯಪುರುಷನು ದೊರೆಯುವದಿಲ್ಲವೆಂಬ ಶಂಕೆಯಿಂದ ಚಕ್ರಾಂಕನಾದಿ ಪಂಚಸಂಸ್ಕಾರಗಳನ್ನೂ ಏತಕ್ಕೆ ಬಿಡುವದಿಲ್ಲ?

ಸ್ಮೃತೀತಿಹಾಸಯುಕ್ತವಾದವೇದಗಳಿಂದಲೂ, ಪುರಾಣಗಳಿಂದಲೂ, ಶಿಷ್ಟಾಚಾರಗಳಿಂದಲೂ, ಭಗವದಾಜ್ಞೆಯಿಂದಲೂ ನಿಯಮಿತವಾದ ಕ್ರತುಗಳನ್ನು ಬಿಡುವ ಈ ಜನರು, ಶ್ರುತಿಸ್ಮೃತೀತಿಹಾಸಪುರಾಣಶಿಷ್ಟಾಚಾರಭಗವದಾಜ್ಞೆಗಳಿಗೆ ವಿರುದ್ಧವಾದ ಸ್ವಸಂಕೇತಸಿದ್ಧವಾದ ಕೃತ್ಯಗಳನ್ನು ಮಾಡುವದಲ್ಲದೆ ಶ್ರೌತಸ್ಮಾರ್ತಾನುಷ್ಠಾನಪರರಾದ ಬ್ರಾಹ್ಮಣೋತ್ತಮರನ್ನು ನಿಂದಿಸಿ ಪಾಪಕ್ಕೆ ಗುರಿಯಾಗುವರು.

ಪಶುವಧೆಯಿಂದ ಪಾಪವು ಸಂಭವಿಸುವುದೆಂಬ ಶಂಕೆಯಿಂದ ಕ್ರತುಗಳನ್ನು ಬಿಡುವ ಜನರು ಶಿಷ್ಯರಿಗೆ ಕ್ಲೇಶವು ಸಂಭವಿಸುವುದೆಂಬ ಭೀತಿಯಿಂದ ಚಕ್ರಾಂಕನೆಯನ್ನೂ ಬಿಡಲಿ. ಯಾಗವಿಷಯದಲ್ಲಾದರೋ ಅನೇಕರಿಗೆ ಪಶುವಧೆಯು ಸಮ್ಮತವು. ಭಗವತ್ಪ್ರೀತಿಯು ಫಲವೇ ಹೊರತು ರಾಗದ್ವೇಷಗಳಿಗೆ ಕಾರಣವಾದ ಧನವು ಫಲವಲ್ಲ. ಚಕ್ರಾಂಕನೆಯ ವಿಷಯದಲ್ಲಿ ಶಿಷ್ಯರನ್ನು ಹಿಂಸಿಸುವುದು ಒಬ್ಬೊಬ್ಬರಿಗೆ ಮಾತ್ರ ಸಮ್ಮತವು. ಜಾರಚೋರಕಿರಾತದುಷ್ಟರಿಂದ ಧನಾಗಮವೇ ಫಲವು. ಭಗವತ್ಪ್ರೀತಿಯು ಲವಮಾತ್ರವೂ ಇಲ್ಲ. ಆದಕಾರಣ ಯಜ್ಞಾರ್ಥ ಪಶುವಧೆಗೂ, ಚಕ್ರಾಂಕನೆಗೂ ಇಷ್ಟೇ ತಾರತಮ್ಯವು.

ಕೃಶಾನು—ಸುಡಲ್ಪಟ್ಟ ಶಂಖಚಕ್ರಗಳಿಂದ ಶಿಷ್ಯರ ಶರೀರದಮೇಲೆ ಮುದ್ರೆಗಳನ್ನು ಹಾಕುವುದಕ್ಕೂ ಪಶುಹಿಂಸೆಗೂ ಸಾಮ್ಯವೆ?

ವಿಶ್ವಾವಸು——ಗುಣದೋಷತಾರತಮ್ಯವನ್ನರಿಯದ ಮೂಢನೆ ಕೇಳು—ಒಂದು ಬ್ರಹ್ಮಹತ್ಯೆಯು ಸಹಸ್ರಪಶುವಧೆಗಿಂತಲೂ ಅಧಿಕವಾದ ಪಾಪಕ್ಕೆ ಕಾರಣವಾಗಿರುವಲ್ಲಿ ಒಬ್ಬ ಬ್ರಾಹ್ಮಣನ ಶರೀರದ ಮೇಲೆ ಕಾದ ಶಂಖಚಕ್ರಗಳಿಂದ ಮುದ್ರೆಗಳನ್ನು ಹಾಕುವುದು ಒಂದು ಪಶುವಧೆಗೆ ಸಮಾನವಾಗಲಾರದೆ? ಶಾಸ್ತ್ರಾಧಾರದಿಂದ ಮಾಡುವ ಚಕ್ರಾಂಕನಾಕರ್ಮವು ವೇದವನ್ನವಲಂಬಿಸಿ ಮಾಡುವ ಪಶುವಧೆಗೆ ಸಮಾನವೆನ್ನುವದರಲ್ಲಿ ಸಂಶಯವೇನು? ಹೀಗೆ ನುಡಿದು ವಿಮಾನವನ್ನು ಮುಂದಕ್ಕೆ ಹೊರಡಿಸಿ ಸೌಂದರ್ಯಾತಿಶಯದಿಂದ ಮೆರೆಯುತ್ತಿರುವ ರಮಣಿಯರ ಕಾಲಂದಿಗೆಗಳ ಇಂಪಾದ ಝಣಝಣತ್ಕಾರದಿಂದ ಕಾಮೋದ್ರೇಕವುಳ್ಳ ಯುವಕರಿಂದ ನಿಬಿಡವಾದ ಚೆಂಜೀಪುರಕ್ಕೆ ಕೃಶಾನುವಿನೊಡನೆ ಬಂದನು.

ಋಗ್ಯಜುಸ್ಸಾಮವೇದಗಳನ್ನೋದಿರುವದರಿಂದ ಪವಿತ್ರರಾಗಿಯೂ, ಸ್ಮೃತಿಪುರಾಣೇತಿಹಾಸಪಾರಂಗತರಾಗಿಯೂ, ಚತುಷ್ಷಷ್ಟಿಕಲಾಧುರೀಣರಾಗಿಯೂ ದುರವಗಾಹಗಳಾದ ತರ್ಕವ್ಯಾಕರಣಮೀಮಾಂಸಾವೇದಾಂತಶಾಸ್ತ್ರಗಳಲ್ಲಿ ನಿಪುಣರಾಗಿಯೂ ಇರುವ ಬ್ರಾಹ್ಮಣೋತ್ತಮರಿಂದ ಅಧಿಷ್ಠಿತವಾದ ಈ ಚೆಂಜೀಪುರಿಯು ಎಷ್ಟು ರಮಣೀಯವಾಗಿದೆ ನೋಡೆಂದನು.

ಕೃಶಾನು—ಇದನ್ನು ಕೇಳಿ ನಕ್ಕು ಪರ್ವತಗಳಂತಿರುವ ದುರ್ಗಮವಾದ ಪ್ರಾಕಾರಗಳನ್ನು ಆಕ್ರಮಿಸುವದರಲ್ಲಿ ಉದ್ಯುಕ್ತರಾದ, ಯುದ್ಧರಂಗದಲ್ಲಿ ಓಡಾಡುತ್ತಿರುವ ರಾಜಭಟರ ತಲೆಗಳಿಂದಸ್ರವಿಸುತ್ತಿರುವ ರಕ್ತಧಾರೆಗಳಿಂದಲೂ ಮಾಂಸರಾಶಿಗಳಿಂದಲೂ ನಿಬಿಡವಾದ ಈ ಚೆಂಜೀಪುರಿಯು ನೋಡುವವರ ಮನಸ್ಸಿಗೆ ಜುಗುಪ್ಸೆಯನ್ನುಂಟುಮಾಡುವದು.

ವಿಶ್ವಾವಸು—ಗುಣಭರಿತವಾದ ಈ ಚೆಂಜೀಪುರಿಯನ್ನು ನಿಂದಿಸುವ ನೆವದಿಂದ ಅದನ್ನು ಸ್ತುತಿಸುತ್ತಿದ್ದೀಯೆ.

ಕೃಶಾನು—ದಶದಿಕ್ಕುಗಳಲ್ಲಿಯೂ ರಾಜ್ಯಭಾರವಂ ಮಾಡುವ ಅನೇಕ ರಾಜರು ಪ್ರಾಣಗಳನ್ನಾದರೂ ಬಿಟ್ಟು ಈ ಚೆಂಜೀಪುರಿಯನ್ನು ಜಯಿಸಲೋಸುಗ ಯುದ್ಧಸನ್ನದ್ಧರಾಗಿರುವರು. ನಿರತಿಶಯವಾದ ಐಶ್ವರ್ಯವನ್ನು ಲಕ್ಷಿಸದೆ, ಗಜ ತುರಗರಥಾದಿಸಂಪತ್ಸಮೃದ್ಧವಾದರಾಜ್ಯವನ್ನು ಬಿಟ್ಟು, ದೈರ್ಘ್ಯಚಾಕಚಕ್ಯಗಳಲ್ಲಿ ಕಮಲಗಳನ್ನು ನಿಂದಿಸುವಷ್ಟು ಸುಂದರವಾಗಿರುವ ಕಣ್ಣುಗಳುಳ್ಳ ಸಂಭೋಗಾರ್ಹರಾಗಿಯೂ ಶುಭಶೀಲರಾಗಿಯೂ ಇರುವ ತರುಣಿಯರನ್ನುಪೇಕ್ಷಿಸಿ ಶತ್ರುರಾಜ್ಯವನ್ನುಜಯಿಸುವುದಕ್ಕೋಸ್ಕರ ಸೇನಾಸಮೇತರಾಗಿ ರಣರಂಗದಲ್ಲಿ ಮೆರೆಯುತ್ತಿರುವ ಕರುಣಾಹೀನರಾದ ಈ ರಾಜರ ದುರ್ನಿವಾರವಾದ ಅವಿವೇಕವನ್ನೆಷ್ಟು ವರ್ಣಿಸಲಿ! ಪ್ರಾಣಕ್ಕಿಂತಲೂ ರಾಜ್ಯತೃಷ್ಣೆಯು ಹೆಚ್ಚೆ?

ವಿಶ್ವಾವಸು—ಎಲೈ ಮಂದಮತಿಯೇ! ವಿವೇಕವನ್ನು ಅವಿವೇಕವೆಂದು ಭಾವಿಸುತ್ತೀಯೆ. ಇದು ಸರಿಯಲ್ಲ. ಐಶ್ವರ್ಯವು ಮಳೆಗಾಲದಲ್ಲಿ ನೀರುಳ್ಳ ಕಾಡುಗಾಲಿವೆಯಂತೆ ಅಸ್ಥಿ

ರವೆಂದೂ, ಪ್ರಭುತ್ವವು ಮಿಂಚಿನಂತೆ ಕ್ಷಣಿಕವಾದುದೆಂದೂ, ನಾರಿಯರು ಸೂರ್ಯಕಿರಣಗಳನ್ನು ಮರೆಮಾಡುವ ಮೇಘಗಳಂತೆ ಕಾಂತಿಹೀನವಾದ ಯೌವನವುಳ್ಳವರೆಂದೂ, ದೇಹವು ತೈಲವರ್ಜಿತವಾದ ದೀಪದಂತೆ ಕ್ಷಣಭಂಗುರವೆಂದೂ ಆಲೋಚಿಸಿ ನಿರ್ಮಲಾಂತಃಕರಣರಾದ ಈ ರಾಜರು ಶಾಶ್ವತಸುಖಸ್ಥಾನವಾದ ಸ್ವರ್ಗವನ್ನು ಬಯಸಿ ಯುದ್ಧರಂಗದಲ್ಲಿ ಪ್ರಾಣಗಳನ್ನು ಬಿಡುವರು. ಈ ರಹಸ್ಯವನ್ನು ಕೇಳು:— ಯುದ್ಧದಲ್ಲಿ ಭಟರು ರಕ್ತದಿಂದ ಕೆಂಪಾದ ಶರೀರವುಳ್ಳವರಾಗಿದ್ದರೆ ಅವರಲ್ಲಿ ಸುರನಾರಿಯರು ಅನುರಾಗವುಳ್ಳವರಾಗುವರು. ಆ ಶೂರರು ಘೋರವಾದ ಬಾಣಗಳಿಂದ ಗಾಯಮಾಡಲ್ಪಟ್ಟ ದೇಹವುಳ್ಳವರಾಗಿದ್ದರೆ ಆ ದೇವಾಂಗನೆಯರೂ ಕೂಡ ತೀವ್ರವಾದ ಮನ್ಮಥಬಾಣಗಳಿಂದ ಗಾಯಮಾಡಲ್ಪಟ್ಟ ಶರೀರವುಳ್ಳವರಾಗಿ ಅಂತಹವೀರಾಗ್ರೇಸರರನ್ನು ಎಂದು ನೋಡುವೆವೆಂದು ಹಗಲಿರುಳೂ ಅನುರಾಗದೊಡನೆ ನಿರೀಕ್ಷಿಸುತ್ತಿರುವರು. ಇಂತಹ ವೀರರು ದಿವ್ಯವಿಮಾನದಲ್ಲಿ ಕುಳಿತು ಪ್ರಭಾತಿಶಯದಿಂದ ಉಜ್ಜ್ವಲಿಸುತ್ತಿರುವ ದೇಹವುಳ್ಳವರಾಗಿ, ಕರಯುಗದಿಂ ಅಮರವಿಲಾಸಿನಿಯರ ಕುಚಯುಗವನ್ನು ಆಲಂಗಿಸಿ, ಆ ದೇವನಾರಿಯರು ಮಾಡಿದ ನಖಕ್ಷತಗಳನ್ನು ನೋಡುತ್ತಾ, ಕಾಂತಿಯಿಲ್ಲದೆ ನೆಲದಮೇಲೆ ಬಿದ್ದಿರುವ, ಶತ್ರುರಾಜರ ಬಾಣಕ್ಷತಗಳಿಂದ ತುಂಬಿರುವ ತಮ್ಮ ಪಾರ್ಥಿವದೇಹಗಳನ್ನು ನೋಡಿ ಸಂತೋಷದಿಂದ ಸ್ವರ್ಗಾರೋಹಣವನ್ನು ಮಾಡುತ್ತಿರುವರು; ಎಂದು ನುಡಿದು ವಿಮಾನದಲ್ಲಿ ಮುಂದೆಪ್ರಯಾಣಮಾಡಿ ಸುತ್ತಲೂ ನೋಡುತ್ತಾ

ಪಾಪನಾಶಿನಿಯಾದ ದಕ್ಷಿಣಪಿನಾಕಿನಿಯನ್ನೂ, ಜಲಭರಿತವಾದ ಗರುಡಾನದಿಯನ್ನೂ ವೀಕ್ಷಿಸಿ—"ಈ ದಕ್ಷಿಣಪಿನಾಕಿನೀಗರುಡಾನದಿಗಳ ತೀರದಲ್ಲಿ ದೇವತಾಸಾರ್ವಭೌಮನಾದ ಶ್ರೀವಿಷ್ಣುವು ಕ್ರೀಡಾರ್ಥವಾಗಿ ಪ್ರಕಾಶಿಸುತ್ತಿರುವನು" ಎಂದು ನುಡಿದು ವಿಮಾನವನ್ನು ಮುಂದೆ ಹೊರಡಿಸಿ ಆನಂದಭರಿತನಾಗಿ ನುಡಿದನವೆಂತೆಂದರೆ:—

ಸಕಲಪಾಪಪರಿಹಾರಕವಾದ ಶ್ರೀಮುಷ್ಣ (ತಿರುಮುಷಿ) ಎಂಬ ಕ್ಷೇತ್ರವನ್ನು ದೈವವಿಪಾಕದಿಂಹೊಂದಿದೆವು. ಇಂದು ನಾವು ಮಾಡಿದ ಪಾಪಗಳೆಲ್ಲವೂ ನಶಿಸಿಹೋದವೆಂದು ಭಾವಿಸತಕ್ಕದು.

ಸಕಲಸಜ್ಜನಸನ್ನುತನಾಗಿಯೂ, ಸರ್ವಾಂತರ್ಯಾಮಿಯಾಗಿಯೂ, ಸರ್ವೋತ್ತಮನಾಗಿಯೂ, ಸಮಸ್ತಜಗದಾಧಾರನಾಗಿಯೂ, ಸಚ್ಚಿದಾನಂದಸ್ವರೂಪನಾಗಿಯೂ ಇರುವ ಗರುಡಧ್ವಜನುವರಾಹರೂಪವನ್ನು ತಾಳಿ ಈ ಪುಣ್ಯಕ್ಷೇತ್ರದಲ್ಲಿ ವಾಸಿಸುತ್ತಾ ಸೇವಕರಿಗೆ ಪರಮಪದವನ್ನು ಕೊಡುತ್ತಿರುವನು. ಭೂದೇವಿಯಲ್ಲಿ ಅನುರಾಗವನ್ನಿಟ್ಟು, ಭಕ್ತರಕ್ಷಣೆಯೆಂಬ ಸಂಕಲ್ಪದಿಂದ ನಿರ್ಮಲೋದಕವುಳ್ಳ ದಕ್ಷಿಣಪಿನಾಕಿನಿಯ ತೀರದಲ್ಲಿ ಆದಿವರಾಹಾವತಾರವನ್ನು ಧರಿಸಿ ಪ್ರಕಾಶಿಸುತ್ತಿರುವ ಲಕ್ಷ್ಮೀಕಾಂತನನ್ನು ನೋಡಿ ನಿಷ್ಕಲ್ಮಷನಾಗೆಂದು ಕೃಶಾನುವಿಗೆ ಹೇಳಿದನು.

ಕೃಶಾನು—ರಾಗದ್ವೇಷಾದಿದೋಷರಹಿತನಾದ ಶ್ರೀನಾರಾಯಣನೇ ಭೂಮಿಯನ್ನು ಪಡೆಯಬೇಕೆಂಬ ಆಶೆಯಿಂದವರಾಹಾದಿತಿರ್ಯಗ್ರೂಪಗಳನ್ನು ಧರಿಸಿದರೆ, ಮನುಷ್ಯನೂ

ಭೂಲಾಭಲೋಭದಿಂದ ಸೇವಕತ್ವ ಯಾಚಕತ್ವ ಇವೇ ಮೊದಲಾದ ಅತಿನೀಚವಾದ ವೇಷಗಳನ್ನು ಧರಿಸದೆಬಿಡುವನೆ?

ವಿಶ್ವಾವಸು.—ಭಗವದವತಾರರಹಸ್ಯವನ್ನು ಅರಿಯದ ಮರುಳನೆ! ಕೇಳು—ಭಗವಂತನು ಮತ್ಸ್ಯಾವತಾರವನ್ನಾದರೂ ಧರಿಸಲಿ. ಕೂರ್ಮಾವತಾರವನ್ನಾದರೂ, ವರಾಹಾವತಾರವನ್ನಾದರೂ, ಸಿಂಹರೂಪವನ್ನಾದರೂಧರಿಸಲಿ. ಅಥವಾ ಇನ್ನೂ ನೀಚವಾದ ಅಶ್ವಾದಿಗಳ ರೂಪವನ್ನಾದರೂ ಧರಿಸಲಿ. ಸ್ವಾಮಿಗೆ ಈ ಅವತಾರಗಳೆಲ್ಲವೂ ಶುಕ್ಲಶೋಣಿತಸಂಪರ್ಕಸಿದ್ಧವಾದವುಗಳಲ್ಲವಾದುದರಿಂದ ಆತನ ಸ್ವಭಾವಸಿದ್ಧವಾದ ಮಹಿಮೆಗೆ ಏನೂ ಲೋಪ ವುಂಟಾಗುವದಿಲ್ಲ. ಆತನು ತನ್ನ ಮಾಹಾತ್ಮ್ಯವನ್ನು ತೋರಿಸದೆಬಿಡನು. ಲೋಕೈಕಾಧಾರನಾದ ಆದಿವರಾಹಸ್ವಾಮಿಯ ಅಪಾರಮಹಿಮೆಯನ್ನು ತಿಳಿಯಲು ಯಾರುತಾನೆ ಸಮರ್ಥರು?

ಅನವರತವೂ ಭಕ್ತರಿಗೆ ಶುಭವನ್ನೇ ಕೋರುವ ಭಗವಂತನು ಹಿರಣ್ಯಾಕ್ಷನಿಂದ ಆಳವಾದ ಸಮುದ್ರದಲ್ಲಿಡಲ್ಪಟ್ಟ ಭೂಮಿಯನ್ನು ಕಾರಾಗೃಹದಲ್ಲಿಡಲ್ಪಟ್ಟ ಕಂದಫಲದಂತೆ ಹೊರಗೆ ತರಲಿಲ್ಲವೆ? ಮಾಯಾವರಾಹರೂಪನಾದ ಓ ಭಗವಂತನೆ! ದಂಷ್ಟ್ರಾರೂಪವಾದ ದೀಪಸ್ತಂಭವೆಷ್ಟು ಸುಂದರವಾಗಿರುವದು! ಸಮುದ್ರವೆಂಬ ತೈಲಪ್ರವಾಹದಿಂದ ಪೂರಿತವಾದ ಭೂಮಿಯು ತನ್ನನ್ನು ಉದ್ಧಾರಮಾಡಿದನೆಂದು ಸಂತೋಷಯುಕ್ತಳಾಗಿ ದೀಪಪಾತ್ರದಂತಿರುವುದು. ಅದರಲ್ಲಿರುವ ಮೇರುಪರ್ವತವು ಬಹಳ ಪ್ರಕಾಶಮಾನವಾಗಿರುವದರಿಂದ ನಿಷ್ಕಂಪದೀಪದಂತಿರುವುದು. ಇಂತಹ ಸ್ತಂಭವ

ನ್ನು ನಾನು ಅನವರತವೂ ಧ್ಯಾನಿಸುವೆನು: ಎಂದು ನುಡಿದು ಮುಂದಕ್ಕೆ ಪ್ರಯಾಣ ಮಾಡಿ ಕಾವೇರೀನದಿಯ ತೀರದಲ್ಲಿ ಬೀಸುವ ಗಾಳಿಯನ್ನು ವರ್ಣಿಸಲಾರಂಭಿಸಿದನು:—

ತರಳವಾದ ಕಾವೇರೀತರಂಗಗಳಲ್ಲಿ ಸುತ್ತಿಸುತ್ತಿ, ದಿವ್ಯವಾದ ಕಲ್ಹಾರಪುಷ್ಪಗಳನ್ನು ವಿಕಾಸಿಸಿ, ಅವುಗಳ ಪರಿಮಳವನ್ನು ಪರಿಗ್ರಹಿಸಿ, ಕಾವೇರಿಯ ಮೇಲೆ ಬೀಸುವದರಿಂದ ಶೀತವಾಗಿಯೂ ಸ್ಪರ್ಶಸುಖವಾಗಿಯೂ ಇರುವ ಮಾರುತವು ಪ್ರಯಾಣದಿಂ ಬಳಲಿದ ಮಾರ್ಗಸ್ಥರ ಆಯಾಸವನ್ನು ನಿಶ್ಶೇಷವಾಗಿ ಪರಿಹರಿಸುತ್ತಿದೆ. ಆದುದರಿಂದ ಅದು ಶ್ಲಾಘನೀಯವಲ್ಲವೆ?

ಅಜ್ಞಾನ ನಾಶನಕ್ಕೋಸುಗ ಜನ್ಮಿಸಿದಂತಹ ಕಾವೇರೀ ಪ್ರವಾಹವು ಬಹಳ ಉದ್ದವಾದುದು; ಅತಿವೇಗದೊಡನೆ ಹರಿವುದು; ಚಂಚಲವಾದ ಕಮಲಗಳಿಂದ ತುಂಬಿ ತುಳುಕುತ್ತಿರುವುದು; ರಂಗಪುರಕ್ಕೆ ಸಮೀಪದಲ್ಲಿ ಪ್ರವಹಿಸುತ್ತಿರುವುದು. ಇಂತಹ ವರ್ಣನಾರ್ಹವಾದ ಗುಣಸಂಪತ್ತಿಯುಳ್ಳ ಕಾವೇರೀತೀರ್ಥವನ್ನು ಅನವರತವೂ ಧ್ಯಾನಿಸೋಣ; ಅಧಿಕವಾಗಿ ಸನ್ಮಾನಿಸೋಣ; ಎಂದು ನುಡಿದು ಮುಂದೆ ಹೊರಟು ಮರಳಿ ಹೇಳತೊಡಗಿದನು.

ಈ ಕಾವೇರೀಪ್ರವಾಹವು ಪಾಪದೂಷಿತರಾದ ಮನುಷ್ಯರನ್ನು ನಿಷ್ಕಲ್ಮಷರನ್ನಾಗಿಯೂ, ಪವಿತ್ರರನ್ನಾಗಿಯೂ, ಮಾಡುವುದರಲ್ಲಿ ನಿಶ್ಚಯಿಸಿರುವಂತೆ ತೋರುವುದು. ಇನ್ನೂ ಸಾವಧಾನವಾಗಿ ಕೇಳು: ತಟದ್ವಯದಲ್ಲಿಯೂ ಆಕಾಶವನ್ನು ಮುಟ್ಟುವಷ್ಟು ಎತ್ತರವಾಗಿಯೂ, ಫಲಪುಷ್ಪಭರಿತ

ವಾಗಿಯೂ ಇರುವ ವಕುಳಕ್ರಮುಕಜಂಬೂಜಂಬೀರ ಮಂದಾರಚಂದನಸಹಕಾರಕೇಸರಕುಂದಬದರಪಲಾಶಾಮಲ ಕಾದಿಮಹಾವೃಕ್ಷಜಾತಿಗಳಿಂ ನಿಬಿಡವಾಗಿರುವುದರಿಂದಲೂ, ಧಾರಾರೂಪವಾಗಿ ಸ್ರವಿಸುತ್ತಿರುವ ಮಕರಂದವನ್ನು ಪಾನಮಾಡಲೋಸುಗ ಝುಂಕಾರದೊಡನೆ ಮರಮರದಲ್ಲಿ ಯೂ ದಟ್ಟವಾಗಿ ತುಂಬಿರುವ ಭ್ರಮರಗಳ ಸಮೂಹ ಗಳಿಂದೊಪ್ಪುತ್ತಿರುವದರಿಂದಲೂ, ನೀಲನದಿಯಂತೆ ತೋರು ವದರಿಂದ ಯಮುನಾನದಿಗೆ ಸಮಾನವಾಗಿಯೂ, ರಾತ್ರಿ ಕಾಲದಲ್ಲಿ ಲೀಲಾವಿನೋದಗಳಿಂ ಬಹಳವಾಗಿ ಬಳಲಿದ ಚಂ ಚಲಾಕ್ಷಿಯರಾದ ರಾಜವಿಲಾಸಿನಿಯರ ಸ್ನಾನಕಾಲದಲ್ಲಿ ತೂಗುತ್ತಿರುವ ಮುತ್ತಿನಹಾರಗಳ ಕಾಂತಿಗಳಿಂದ ಬೆಳ್ಳಗಿ ರುವದರಿಂದ ಗರುಡಧ್ವಜನ ಪಾದಕಮಲದಲ್ಲಿ ಹುಟ್ಟಿ ಸ್ವರ್ಗ ಭೂಪಾತಾಳಗಳೆಂಬ ಮೂರು ಲೋಕಗಳನ್ನೂ ಪವಿತ್ರ ಮಾಡಿದಂತಹ ಗಂಗಾನದಿಗೆ ಸಮಾನವಾಗಿಯೂ, ತೀರದಲ್ಲಿ ಪ್ರಕಾಶಿಸುತ್ತಿರುವ ಪುರಾಣಪುರುಷನಾದ ಶ್ರೀ ರಂಗನಾಥ ಸ್ವಾಮಿಗೆ ಹಾಸಿಗೆಯಾದ ಆದಿಶೇಷನ ಹೆಡೆಯಲ್ಲಿ ಹೊಳೆ ಯುತ್ತಿರುವ ದಿವ್ಯಮಣಿಗಳ ಪ್ರಭಾಪರಂಪರೆಯಿಂದ ಕೆಂಪ ಗಿರುವದರಿಂದ ಸರಸ್ವತೀನದಿಗೆ ಸಮಾನವಾಗಿಯೂ, ನಿತ್ಯ ನೈಮಿತ್ತಿಕಕರ್ಮಾನುಷ್ಠಾನದಲ್ಲಿ ಬದ್ಧಕಂಕಣರಾದ ನಿಷ್ಕ ಲ್ಮಷರಾದ ಬ್ರಾಹ್ಮಣಶ್ರೇಷ್ಠರಿಂದ ಮಾಡಲ್ಪಟ್ಟ ವೇದಪಾ ರಾಯಣದಿಂದಲೂ ಕಮಲಪತ್ರಮಧ್ಯದಲ್ಲಿರುವದರಿಂದಲೂ ಬ್ರಹ್ಮನಿಗೆ ಸಮಾನವಾದ ಹಂಸಪಕ್ಷಿಗಳ ವಿಹಾರಕಾಲದಲ್ಲಿ ಅಲ್ಲಾಡಿಸಲ್ಪಟ್ಟ ಪದ್ಮಗಳ ಪರಾಗರೇಣುಗಳಿಂದ ತುಂಬಿರು

ವದರಿಂದ ಚಂದನಕುಂಕುಮಗಳನ್ನು ಹಚ್ಚಿಕೊಂಡಿರುವ ಶರೀರವುಳ್ಳವಳಂತೆಯೂ, ಕಂಠದವರೆಗೂ ನೀರಿನಲ್ಲಿ ಮುಳು ಗಿರುವ ಜಲಕ್ರೀಡಾಸಕ್ತರಾದ ಇಂದುವದನೆಯರ ಮುಖ ಗಳಿಂದುಂಟಾದ—"ತನಗೆ ಸಮಾನವಾದ ಹೆಸರುಳ್ಳ ವಿಷ್ಣು ವು ಅನೇಕಾವತಾರಗಳನ್ನು ಮಾಡಿದನೆಂಬ ಅಸೂಯೆಯಿಂದ ತಾನೂ ಅಷ್ಟು ಅವತಾರಗಳನ್ನು ಮಾಡಬೇಕೆಂದು ಆಕಾಶ ಮಾರ್ಗದಿಂದ ಬಂದ ಚಂದ್ರನ ಪ್ರತಿಬಿಂಬಗಳೋ" ಎಂಬ ಭ್ರಾಂತಿಯು ಚಂದ್ರೋದಯದಲ್ಲಿ ಅಸಮ್ಭವವಾದ ಚಕ್ರ ವಾಕಮಿಥುನಪರಂಪರೆಗಳಿಂದ ಪರಿಹರಿಸಲ್ಪಡಲು,-"ಇವು ಗಳು ಚಂದ್ರಬಿಂಬಗಳಲ್ಲ; ಯುವತಿಯರ ಮುಖಬಿಂಬ ಗಳೇ" ಎಂದು ನಿಶ್ಚಯಿಸಿ, ಅಧಿಕವಾದ ಅನುರಾಗದೊಡನೆ ಎವೆಯಿಕ್ಕದ ಕಣ್ಣುಗಳಿಂದ ನೋಡಿ ನೋಡುತ್ತಿರುವ ಯುವಕರಿಂದ ಶೋಭಿತವಾಗಿಯೂ, ಮಾರ್ಗಾಯಾಸದಿಂ ಬಳಲಿದ ಪ್ರಯಾಣಿಕರ ವಿಶ್ರಾಂತಿಗೆ ಕಾರಣವಾಗಿಯೂ ಇರುವ ಕಾವೇರಿನದಿಯನ್ನು ನೋಡುವ ನೇತ್ರಗಳು ಸಂ ತೋಷದಿಂದ ತುಳುಕುವುವು.

ಕೆಂದಾವರೆಗಳಿಂದ ಕಮನೀಯವಾದ ಪ್ರವಾಹವುಳ್ಳ ಈ ಕಾವೇರಿಯು ಎರಡು ತೀರಗಳಲ್ಲಿಯೂ ಅತ್ಯುನ್ನತವಾದ ಫಲಪುಷ್ಪಭರಿತವಾದ ಸಾಲುಮರಗಳಿಂದಲಂಕೃತವಾಗಿರು ವದರಿಂದ "ಘಡದಿಂದ ಘಡವನ್ನು ದಾಟಲು ಪ್ರಯತ್ನಿಸು ತ್ತಿರುವ ಶ್ವೇತವಸ್ತ್ರಧಾರಿಗಳಾದ ಪ್ರಯಾಣಿಕರ ಪಂಕ್ತಿಗ ಳೋ" ಎಂಬ ಭ್ರಾಂತಿಯನ್ನುಂಟುಮಾಡುತ್ತಿರುವುದು. ಇಂತಪ ದಿವ್ಯತೀರ್ಥವಾದ ಕಾವೇರೀತೀರದಲ್ಲಿ ಮೃಗಾಕ್ಷಿ

ಯುರ ವಿಹಾರಗಳಿಗೆ ಅನುಕೂಲವಾಗಿಯೂ, ನಾನಾವಿಧ ವೃಕ್ಷಸಂಕುಲವಾಗಿಯೂ ಇರುವ ಉಪವನಗಳಿಂದಲೂ, ಸಕಲಶಾಸ್ತ್ರಪಾರಂಗತರಾದ ಬ್ರಾಹ್ಮಣೋತ್ತಮರಿಂದಲೂ ದರ್ಶನೀಯವಾದ ಶ್ರೀರಂಗವೆಂಬೀ ದಿವ್ಯಕ್ಷೇತ್ರವು ಶೋಭಿಸುತ್ತಿರುವುದು. ಈ ಪುಣ್ಯಸ್ಥಲದ ಉದ್ಯಾನಗಳ ವಾಪೀತಟಾಕಗಳಲ್ಲಿರುವ ಹಂಸಪಕ್ಷಿಗಳು ನ್ಯಾಯಶಾಸ್ತ್ರವನ್ನು ಪ್ರಕಟಿಸುವಂತೆ ಮಾತಾಡುತ್ತಿರುವುವು; ಲೀಲಾಸಕ್ತವಾದ ಕೋಗಿಲೆಯು ಪತಂಜಲಿಭಾಷ್ಯವನ್ನು ಹೇಳುವಂತೆ ಹಾಡುತ್ತಿರುವುದು ; ನವಿಲುಗಳು ದ್ವೈತಾದ್ವೈತಗಳನ್ನು ಕುರಿತು ವಾದಿಸುವಂತೆ ಕೂಗುತ್ತಿರುವುವು ; ಶಾರಿಕಾಪಕ್ಷಿಗಳು ಭಟ್ಟವಾರ್ತ್ತಿಕಗಳನ್ನು ಪ್ರಕಟಿಸುವಂತೆ ಕಿರಚುತ್ತಿರುವುವು. ಆಶ್ಚರ್ಯ !

ಈ ದಿವ್ಯಕ್ಷೇತ್ರದಲ್ಲಿರುವ ಯೋಗಿಗಳಾದರೋ ನಿತ್ಯವೂ ಪ್ರಾತಃಕಾಲದಲ್ಲಿ ಪಾವನವಾದ ಕಾವೇರೀನದೀತೀರ್ಥದಲ್ಲಿ ಸ್ನಾನಮಾಡಿ, ಫಣಿತಲ್ಪಶಯನನಾದ ಶ್ರೀರಂಗನಾಯಕಸ್ವಾಮಿಯನ್ನು ವೀಕ್ಷಿಸಿ ನಿಷ್ಕಲ್ಮಷರಾಗಿಯೂ, ವಿಷಯಸುಖಾನಪೇಕ್ಷಿಗಳಾಗಿಯೂ ಇರುವರು. ಅಲ್ಲದೆ ಯಾವಜ್ಜೀವವೂ ಚಿಂತಾಶೋಕಾದಿರಹಿತರಾಗಿ ಕ್ಷಣದಂತೆ ಕಾಲವನ್ನು ಕಳೆಯುತ್ತಿರುವರು. ಲಕ್ಷ್ಮಿಯಿಂದ ಶೋಭಿತವಾದ ವಕ್ಷಸ್ಥಲದಿಂದೊಪ್ಪುತ್ತಿರುವವನಾಗಿಯೂ, ಭಕ್ತರನ್ನು ಅನುಗ್ರಹಿಸಿ ಉದ್ಧಾರಮಾಡುವುದಕ್ಕೋಸುಗವೇ ಶ್ರೀರಂಗದಲ್ಲಿ ಅವತರಿಸಿದವನಾಗಿಯೂ, ಲೋಕೈಕಕಾರಣನಾಗಿಯೂ, ಗಜೇಂದ್ರನ ದುಃಖವನ್ನು ಪರಿಹರಿಸಿ ಮೋಕ್ಷವನ್ನು ಕೊಟ್ಟ

ವನಾಗಿಯೂ, ಶೇಷಶಯನನಾಗಿಯೂ ಇರುವ ಭಗವಂತನಿಗೆ ಮೋಹನಿವೃತ್ತಿಗೋಸ್ಕರ ನಮಸ್ಕಾರವೆಂದು ನುಡಿದು ಸುತ್ತಲೂ ನೋಡಿ ರಂಗನಾಯಕಿಯನ್ನು ವರ್ಣಿಸಲಾರಂಭಿಸಿದನು:—

ಎಲೈ ತ್ರಿಲೋಕಜನನಿಯೇ! ನೀನು ಸಾಂಸಾರಿಕ ಜನರ ಮೋಹನಾಶನಕ್ಕೆ ಸಿದ್ಧೌಷಧವಾಗಿಯೂ, ಮೋಕ್ಷಮಾರ್ಗಕ್ಕೆ ನಿಚ್ಚಣಿಗೆಯಾಗಿಯೂ, ಅಂತಶ್ಶುದ್ಧಿಯನ್ನುಂಟುಮಾಡುವ ಗುಳಿಗೆಯಾಗಿಯೂ, ವಿದ್ಯಾವಿಲಾಸಿನಿಯರಿಗೆ ಲೀಲಾಮಂದಿರವಾಗಿಯೂ, ಮಹಾವಿಷ್ಣುವಿಗೆ ವಕ್ಷೋಭೂಷಣವಾದ ಸ್ವರ್ಣಮಾಲಿಕೆಯಾಗಿಯೂ, ಭಕ್ತರಿಗೆ ಕಲ್ಪವೃಕ್ಷವಾಗಿಯೂ ಬ್ರಹ್ಮಾನಂದಸಮುದ್ರಕ್ಕೆ ತರಂಗವಾಗಿಯೂ ಪ್ರಕಾಶಿಸುತ್ತೀಯೆ.

ಕೃಶಾನು—ಎಲೈ ಮಿತ್ರನೆ! ಅತ್ಯಂತಚಪಲೆಯಾಗಿ, ದುಷ್ಟರಲ್ಲಿ ಪ್ರೀತಿಯುಳ್ಳ ಲಕ್ಷ್ಮಿಯನ್ನು ಗುಣದೋಷತಾರತಮ್ಯವನ್ನರಿಯುವ ಪಂಡಿತನು ಸ್ತೋತ್ರಮಾಡಬಾರದು. ಲಕ್ಷ್ಮೀಕಟಾಕ್ಷಕಾಲದಲ್ಲಿ ಮಣಿಮಯವಾದ ಮಂಚದಮೇಲೆ ಕುಳಿತಿರುವವನು ಆಕೆಯ ಕೃಪೆಯು ತೊಲಗಿದಮೇಲೆ ಮಲಗುವದಕ್ಕೆ ಪರ್ಣಶಯ್ಯೆಯೂ ದೊರೆಯದೆ ಸಂಕಟಪಡುವನು. ಪೂರ್ವದಲ್ಲಿ ಹಾಲೋಗರವನ್ನು ಕದನ್ನವೆಂದು ಎಸೆದವನು ಈಗ ಅಂಬಲಿಯನ್ನಾದರೂ ಅಮೃತವೆಂದು ಭಾವಿಸಿ ಕುಡಿಯುವನು. ಪೂರ್ವದಲ್ಲಿ ಪೀತಾಂಬರವನ್ನುಟ್ಟು ಹೆಮ್ಮೆಯಿಂದ ಮೆರೆಯುತ್ತಿದ್ದವನು ಈಗ ತಿರುಕನಂತೆ ಚಿಂದಿ ಬಟ್ಟೆಗಳ ಬೊಂತೆಯನ್ನಾದರೂ ಬೇಡುವನು.

ಲಕ್ಷ್ಮೀಕಟಾಕ್ಷವಿಲ್ಲದ ಕಾಲದಲ್ಲಿ ಧನಿಕರ ಮನೆಗಳಲ್ಲಿ ಪ್ರವೇಶವನ್ನೇ ಹೊಂದದವನು ಲಕ್ಷ್ಮೀಕಟಾಕ್ಷವು ಬಂದಮೇಲೆ ತನ್ನ ಗೃಹದ್ವಾರದಲ್ಲಿ ಆನೆಗಳನ್ನಿಟ್ಟಿರುವನು. ಪೂರ್ವದಲ್ಲಿ ನೆಲದಮೇಲೆ ಮಲಗಿದ್ದವನು ಈಗ ರಾಜನಾಗಿರುವನು! ಪೂರ್ವದಲ್ಲಿ ತಿಂಡಿಯು ಮೊಗವನ್ನೇ ನೋಡದ ಇವನ ಮಕ್ಕಳೂ ಹೆಂಡತಿಯೂ ಈಗ ಕನಕಹಾರಭೂಷಿತರಾಗಿ ಮೃಷ್ಟಾನ್ನವನ್ನು ತಿನ್ನುವರು. ಲಕ್ಷ್ಮೀಕೃಪೆಯಿಂದ ನೀಚನೂ ಉಚ್ಚನಾಗುವನು.—ಆಶ್ಚರ್ಯ!

ಎಲೈ ಕಮಲೆಯೆ! ಹಣದಾಶೆಯಿಂದ ನಿರಾಪರಾಧಿಗಳಾದ ನೆಂಟರನ್ನು ಕೊಂದು, ಪರಸ್ತ್ರೀಸಂಗವನ್ನು ಮಾಡಿ, ಪರಹಿಂಸಕರಿಗೆ ಗೆಳೆಯರಾಗಿ, ಹೆರರನ್ನು ವಂಚಿಸಿ ಆನಂದಿಸುತ್ತಾ ಕರ್ಣಕಠೋರವಾದ, ಅಶ್ಲೀಲವಾಗ ಮಾತುಗಳನ್ನಾಡಿ, ತಮ್ಮ ಹೊಟ್ಟೆಯಪಾಡನ್ನು ಮಾತ್ರ ನೋಡಿಕೊಳ್ಳುವ ನೀಚರ ಮನೆಗಳಲ್ಲಿ ನೀನು ತಾಂಡವವನ್ನು ಮಾಡುತ್ತೀಯೆ. ಈ ನಿನ್ನ ಸ್ವಭಾವವು ನಿನಗೇ ಇಷ್ಟವು. ಪರಸ್ತ್ರೀಯರನ್ನು ತಾಯಿಯಂತೆ ಎಣಿಸುವವರಾಗಿಯೂ, ಹೆರರಿಗೆ ಕನಸಿನಲ್ಲಿಯೂ ಕೇಡನ್ನು ಬಯಸದವರಾಗಿಯೂ, ಸಟೆಯನ್ನೇ ಅರಿಯದ ಮುಖವುಳ್ಳವರಾಗಿಯೂ, ದನಕರುಗಳ ಸೌಖ್ಯವನ್ನು ಅನುಭವಿಸದವರಾಗಿಯೂ, ಹಸಿವುಸಿಂದ ಸಂಕಟಪಡುತ್ತಿರುವ ಮಕ್ಕಳುಳ್ಳವರಾಗಿಯೂ, ಜಡಿಮಳೆಗಳಿಂದ ಸೋರಿ ಬಿದ್ದುಹೋದ ಮನೆಗಳಲ್ಲಿರಲು ಹೆದರಿ ನಿಲ್ಲುವದಕ್ಕೆ ಅಂಗಾಲಷ್ಟು ಎಡೆಯಿಲ್ಲದೆ ದುಃಖಭಾಗಿಗಳಾಗಿರುವವರನ್ನು ಕೃಪಾಕಟಾಕ್ಷದಿಂದ ವೀಕ್ಷಿಸಿ ಅವರ ಬಡತನವನ್ನು ಹೋ

ಗಲಾಡಿಸಿ ಅವರಿಗೆ ಮನಸ್ತೃಪ್ತಿಯನ್ನುಂಟುಮಾಡಿದರೆ ನಿನಗೆ ಪಾಪವು ಸಂಭವಿಸುವುದೆ ?

ವಿಶ್ವಾವಸು.—ಸ್ನೇಹಿತನೆ! ನಿನ್ನ ವಚನಗಳು ಮನಃಕ್ಲೇಶವನ್ನುಂಟುಮಾಡುವವು. ಕುಲಶೀಲಾದಿ ಹೀನರ ಐಶ್ವರ್ಯವು ಸಾಧುಗಳಿಗೆ ಅನುಪಯುಕ್ತವಾದುದರಿಂದ ಐಶ್ವರ್ಯಾಭಾಸವೆಂದು ಹೇಳಲ್ಪಡುವುದು. ಅಂತಹ ಐಶ್ವರ್ಯವು ಸಂಸಾರತರಣಕ್ಕೆ ಕಾರಣವಾದ ಲಕ್ಷ್ಮೀಕಟಾಕ್ಷದಿಂದ ಬಂದುದಲ್ಲವೆಂದು ತಿಳಿಯತಕ್ಕುದು. ಈ ವಿಷಯದಲ್ಲಿ ಇಂದ್ರನು ಹೇಳಿರುವ ವಾಕ್ಯವನ್ನು ಕೇಳು.—

" ಸದ್ಯೋವೈಗುಣ್ಯಮಾಯಾಂತಿಶೀಲಾದ್ಯಾಸ್ಸಕಲಾಗುಣಾಃ । ಪರಾಙ್ಮುಖೀಜಗದ್ಧಾತ್ರೀಯಸ್ಯತ್ವಂ ವಿಷ್ಣುವಲ್ಲಭೇ" ಎಂದರೆ ಯಾರನ್ನು ಲಕ್ಷ್ಮಿಯು ಅನುಗ್ರಹಿಸುವುದಿಲ್ಲವೋ ಅವನು ಧನಿಕನಾದರೂ ದುಶ್ಶೀಲನಾಗುವನು. ಕ್ಷುದ್ರರ ಐಶ್ವರ್ಯವು ಅನ್ಯಾಯಮಾರ್ಗದಿಂದ ಬಂದುದೇಹೊರತು ಲಕ್ಷ್ಮೀಕೃಪೆಯಿಂದುಂಟಾದುದಲ್ಲ. ಆದುದರಿಂದ ಆ ಕ್ಷುದ್ರರು ಮುಂದೆ ಅನುಭವಿಸುವ ನರಕಯಾತನೆಯನ್ನು ಅದು ಸೂಚಿಸುವುದು. ಈ ಕಲಿಕಾಲದ ಧನಿಕರು ಮತಂಗಜಗಳದಂತೆ ಮದಾಂಧರಾಗಿ ಯಥಾರ್ಥವಾಗಿ ಧನ್ಯರಲ್ಲದಿದ್ದರೂ ತಾವು ಧನ್ಯರೆಂದು ತಿಳಿದುಕೊಂಡು ದುರಹಂಕಾರದಿಂದ ಪಂಡಿತರನ್ನು ತಿರಸ್ಕರಿಸುವವರಾಗಿಯೂ, ದುರ್ಬುದ್ಧಿಗಳಾದುದರಿಂದ ಧರ್ಮಬೋಧೆಗೆ ಕಿವಿಗೊಡದೆಯೂ, ಎಳ್ಳಷ್ಟು ತಾಮಸಪುಣ್ಯದಿಂದ ಲಭಿಸಿದ ಐಶ್ವರ್ಯವುಳ್ಳವರಾಗಿಯೂ, ವಿಟರಾಗಿಯೂ ದುಷ್ಟರಾಗಿಯೂ, ಮೂರುಮುಕ್ಕಾಲು ಘಳಿಗೆಯ ಕಾಲ

ಮೆರೆಯುತ್ತಿದ್ದು, ಎಷ್ಟು ಲೋಭಿಗಳಾದರೂ ಪಂಚಪ್ರಾಣಗಳನ್ನೂ ಬಿಟ್ಟು ಯಮಲೋಕದಲ್ಲಿ ತೀವ್ರವೇದನೆಯನ್ನು ಪ್ರಳಯಪರ್ಯಂತವೂ ಅನುಭವಿಸುವರು. ಅಯ್ಯೋ! ಇದು ಶೋಚ್ಯವಾಗಿದೆ! ಮಹಾಲಕ್ಷ್ಮಿಯು ಜಿಷ್ಟರಿಗೆ ಐಶ್ವರ್ಯವನ್ನು ಕೊಡುವುದಿಲ್ಲವೆಂಬ ನಿನ್ನ ವಚನವು ನಿನ್ನ ಮಾಘ್ಯಾತಿಶಯವನ್ನು ವ್ಯಂಜಿಸುತ್ತಿರುವುದು. ಏತಕ್ಕೆಂದರೆ— ಸಜ್ಜನರು ಆ ಮಹಾಲಕ್ಷ್ಮಿಯ ಕೃಪಾಕಟಾಕ್ಷದಿಂದ ಅವಲೋಕಿತರಾಗಿ ತಮೋವಿಕಾರರಹಿತರಾಗಿ ದೇಹಾವಸಾನಕಾಲದಲ್ಲಿ ಅತಿದುರ್ಲಭವಾದ ಮೋಕ್ಷಸಾಮ್ರಾಜ್ಯವನ್ನು ಹೊಂದುವರು. ಇದಕ್ಕಿಂತಲೂ ಶ್ಲಾಘನೀಯವೂ, ಸ್ಪೃಹಣೀಯವೂ ಆದ ಐಶ್ವರ್ಯವಾವುದು? ಲೋಕದಲ್ಲಿ ಸತ್ಪುರುಷರು ಗರ್ವಿಷ್ಠರು, ಕಾಮಪರವಶರು ಆದ ರಾಜರಿಂದ ಏನೂ ಪ್ರಯೋಜನವಿಲ್ಲವೆಂದೆಣಿಸಿ ಸುರಪತಿಸನ್ನುತೆಯಾದ ಪ್ರಸಿದ್ಧಳಾದ ಲಕ್ಷ್ಮೀದೇವಿಯನ್ನು ಧ್ಯಾನಿಸುವರು; ಎಂದು ನುಡಿದು ಮುಂದೆ ಪ್ರಯಾಣಮಾಡಿ ಗರುಡನನ್ನು ವರ್ಣಿಸಲಾರಂಭಿಸಿದನು. ಅಮೃತಹರಣ ಸಮಯದಲ್ಲಿ ಇಂದ್ರನ ಸೊಕ್ಕನ್ನು ಮುರಿದ ಗರುಡನು ನೇತ್ರಾನಂದವನ್ನುಂಟುಮಾಡುತ್ತಿರುವನು.

ಕೃಶಾನು.—ಮರ್ಯಾದೆಯನ್ನತಿಕ್ರಮಿಸಿದ ಗರುಡನನ್ನೇತಕ್ಕೆ ಶ್ಲಾಘಿಸುವೆ? ಗರುಡನು ವೇದಾತ್ಮನಾದರೂ, ಪಕ್ಷಿಗಳಿಗೆಲ್ಲಾ ಒಡೆಯನಾದರೂ, ಭಗವಂತನಿಗೆ ವಾಹನವಾದರೂ, ಹಿರಣ್ಯಪುರವೆಂಬ ಬ್ಯಾಡರ ಪಾಳ್ಯವನ್ನು ಹೇಗೆ ತಿಂದನು?

ವಿಶ್ವಾವಸು.—ಪಕ್ಷಿರಾಜನು ಹಿರಣ್ಯಪುರವನ್ನು ತಿಂದು ತನ್ನ ದುಷ್ಟನಿಗ್ರಹಶಿಷ್ಟಪರಿಪಾಲನಸಾಮರ್ಥ್ಯವನ್ನು ವ್ಯಕ್ತಮಾಡಿದನು. ಗರುಡನು ಮಹಾಪಾತಕಿಗಳಾದ ಬ್ಯಾಡರನ್ನು ಕೊಂದು ಆ ಕಿರಾತಸಮೂಹದ ಮಧ್ಯದಲ್ಲಿ ಬಿದ್ದಿದ್ದ ಅನಾಥನಾದ ಒಬ್ಬ ಬ್ರಾಹ್ಮಣನನ್ನು ಬಿಡಿಸಿ ಕಾಪಾಡಿದನು; ಈಶ್ವರಸೇವಾಕಾಲದಲ್ಲಿ ಶಂಕರನ ಸರ್ಪಸಮೂಹವನ್ನು ನೋಡಿ ಭೀತರಾದ ದೇವತೆಗಳಿಗೆ ಅಭಯವನ್ನು ಕೊಟ್ಟು ರಕ್ಷಿಸಿದನು. ಚಿನ್ನದಂತೆ ಥಳಥಳಿಸುತ್ತಿರುವ ಶರೀರವುಳ್ಳ ಗರುಡನು ನಮ್ಮ ಶತ್ರುಗಳನ್ನು ಸಂಹರಿಸಿ ನಮಗೆ ಕ್ಷೇಮವನ್ನುಂಟುಮಾಡಲಿ. ಶ್ರೀರಂಗಕ್ಷೇತ್ರದಲ್ಲಿ ವಾಸಿಸಿ, ಶಿಷ್ಯರಿಗೆ ಶಾಸ್ತ್ರೋಪದೇಶವನ್ನು ಮಾಡಿ, ಶ್ರೀರಂಗನಾಯಕಸ್ವಾಮಿಯನ್ನು ಸೇವಿಸಿ, ಪಾಪರಹಿತರಾಗಿ ಸಂಸಾರಭಯವನ್ನು ತಪ್ಪಿಸಿಕೊಂಡಿರುವ ಸತ್ಪುರುಷರಿಗೆ ನಮಸ್ಕಾರವೆಂದು ವಿಶ್ವಾವಸುವು ಹೇಳಿದನು.

ಕೃಶಾನು.—ಈ ಪಟ್ಟಣದ ಜನರೆಲ್ಲರೂ ಸ್ತುತ್ಯರ್ಹರಲ್ಲ ಏತಕ್ಕೆಂದರೆ—ಗುಣಸಾಂದ್ರರಾದ ಹರಿದಾಸರನೇಕರಿದ್ದರೂ ಈ ಊರಿನಲ್ಲಿ ಕೆಲವರು ಅನ್ನವಿಕ್ರಯವನ್ನು ಮಾಡಿ ಜೀವಿಸುವರು. ರಂಗನಾಥನಿಗೂ ಶಕ್ರಾದ್ಯಾವರಣದೇವತೆಗಳಿಗೂ ನಿವೇದಿತವಾಗಿರುವದರಿಂದ ಪಾಪಹರವಾದ ಅನ್ನವನ್ನು ವ್ರಾತ್ಯಾಧಮರಾದ ಈ ಜನರು ಧನಾಶೆಯಿಂದ ವಿಕ್ರಯಿಸಿ ಜೀವಿಸುವರು. ಇಂತಹ ನೀಚರು ಸ್ವಾಮಿಯ ಅನುಗ್ರಹದಿಂದ ದುರ್ಲಭವಾದ ಪರಮಪದವನ್ನು ಹೊಂದಿದರೂ ಧನಾಶೆಯಿಂದ ಸಂತುಷ್ಟರಾಗದೆ ಆ ಪುಣ್ಯಪದವ

ನ್ನೂ ವಿಕ್ರಯಿಸಲು ಹಿಂದೆಗೆಯುವದಿಲ್ಲ. ಇವರಗಿಂತಲೂ ನೀಚರುಂಟೆ?

ವಿಶ್ವಾವಸು.—ಎಲೈಮಂದಮತಿಯೇ! ಹೀಗೆ ನುಡಿಯಬೇಡ. ಅನವರತವೂ ಶ್ರೀರಂಗನಾಥಚರಣಾರವಿಂದಧ್ಯಾನದಲ್ಲಿ ನಿರತರಾದ ಈ ಸತ್ಪುರುಷರಿಗೆ ಕೆಲವು ನೀಚರಸಂಪರ್ಕವಿದ್ದರೂ ಅವರ ಮಹಿಮೆಗೆ ಏನೂ ಲೋಪವುಂಟಾಗುವುದಿಲ್ಲ. ಅತ್ಯುತ್ತಮವಾದ ಔಷಧವನ್ನು ಸೇವಿಸುವರೋಗಿಗಳು ಎಂದಾದರೂ ಅಪಥ್ಯವನ್ನು ಸೇವಿಸಿದರೆ ಏನುಬೀಳಾಗುವುದು? ಎಂದು ನುಡಿದು ವಿಮಾನವನ್ನು ಮುಂದಕ್ಕೆತಳ್ಳಿ ಜಂಬುಕೇಶ್ವರಕ್ಷೇತ್ರಕ್ಕೆ ಬಂದು ಕೃಶಾನುವನ್ನುಕುರಿತು ಮರಳಿ ಹೇಳಲಾರಂಭಿಸಿದನು. ಮನ್ಮಥನ ಗರ್ವವನ್ನು ಮುರಿದ, ನಾಗಭೂಷಣನಾದ, ಕೈಲಾಸವಾಸಿಯಾದಶ್ರೀಶಂಕರನು ಪಾರ್ವತೀಸಮೇತನಾಗಿ ಕಾವೇರೀತೀರದಲ್ಲಿರುವ ಜಂಬುಕೇಶ್ವರಕ್ಷೇತ್ರದಲ್ಲಿ ಕ್ರೀಡಿಸುತ್ತಿರುವನು.

ಕೃಶಾನು.—ಎಲೈ ಸಖನೆ! ವಿಶ್ವವಿಲಕ್ಷಣವಾದ ರೀತಿಯುಳ್ಳ ಈ ದೇಶದಲ್ಲಿ ನಾವಿರಬಾರದು. ಏತಕ್ಕೆಂದರೆ—ಲೋಕದಲ್ಲಿ ನದೀಜಲದಿಂದಭಿಷಿಕ್ತರಾದವರಿಗೆ ತಾಪನಿವಾರಣೆಯಾಗುವದು ಸರಿಯಷ್ಟೆ. ಇಲ್ಲಿಯಾದರೋ ಕಾವೇರೀತೀರ್ಥದಿಂದ ಈಶ್ವರನಿಗೆ ಅಭಿಷೇಕಮಾಡಿದರೆ ಕಾವೇರೀನದಿಗೆ ತಾಪನಿವಾರಣೆಯಾಗುವುದು. ಪರಮಾಶ್ಚರ್ಯ!

ವಿಶ್ವಾವಸು.—ಅದು ಹೇಗೆ?

ಕೃಶಾನು—ಸಾವಧಾನವಾಗಿ ಕೇಳು. ಗಂಗಾಸಂಬಂಧದಿಂದ ಯಮುನಾನದಿಯು ಮುದಿಸಿರುವಳೆಂದು ಮನಸ್ತಾ

ಪವನ್ನು ಪೊಂದಿದ ಕಾವೇರಿಯು ಈಶ್ವರನ ತಲೆಯಮೇಲೆ ಅಭಿಷೇಕಕಾಲದಲ್ಲಿ ಬೀಳುವದರಿಂದ ತನಗೂ ಗಂಗಾಸಂಬಂಧವುಂಟಾಯಿತೆಂಬ ಸಂತೋಷದಿಂದ ತಾಪರಹಿತಳಾಗುವಳು.

ವಿಶ್ವಾವಸು—ಇಂತಹ ದೂಷಣೆಯು ಗುಣಗ್ರಾಹಿಗಳಿಗೆ ಅಭಿಮತವೇ ಎಂದು ಪೇಳಿ ಆನಂದಭರಿತನಾಗಿ ಮುಂದೆ ಹೊರಟು ಕೃಶಾನುವಿನೊಡನೆ ವಿಶ್ವಾವಸುವು ಚೋಳದೇಶಕ್ಕೆ ಬಂದನು. ಹರಿಹರದೇವಾಲಯಗಳಿಂದ ಅಲಂಕೃತವಾಗಿಯೂ, ಹೂದೋಟಗಳಿಂದಲೂ, ತೆಂಗಿನಮರಗಳಿಂದಲೂ ನಿಬಿಡವಾಗಿಯೂ, ಶ್ರೇಷ್ಠವಾದ ತಾಂಬೂಲಲತೆಗಳಿಂದ ಆಲಿಂಗಿತವಾಗಿರುವದರಿಂದ ಕಾಮಿನಿಯರಿಂದ ಆಲಿಂಗಿತವಾದ ಕಾಮುಕರಂತೆ ತೋರುವ ಕ್ರಮುಕವೃಕ್ಷಗಳಿಂದಲೂ ಪರಿಪೂರ್ಣವಾಗಿರುವ ಈ ಚೋಳದೇಶವು ಸರ್ವೋತ್ಕರ್ಷದಿಂದೊಪ್ಪುತ್ತಿರುವುದು.

ಕೃಶಾನು.—ನನಗಾದರೋ ಹೀಗೆ ತೋರುವುದು. ಚಲಿಸುತ್ತಿರುವ ಎಲೆಗಳಿಂದಲೂ ದೊಡ್ಡದೊಡ್ಡ ಹಣ್ಣುಗಳಿಂದಲೂ ತುಂಬಿರುವ ಅತ್ಯುನ್ನತವಾದ ಈ ತೆಂಗಿನಮರಗಳು ಗಾಳಿಯಿಂದ ಮೇಲಕ್ಕೆ ಎದ್ದ ಧೂಳಿನಿಂದ ಆವೃತವಾಗಿರುವದರಿಂದ ಪ್ರಕಾಶಮಾನವಾದ ಜಟೆಗಳುಳ್ಳ, ಭಸ್ಮೋದ್ಧೂಳಿತಶರೀರರಾದ, ವಸ್ತ್ರರಹಿತರಾದ ಗೋಸಾಹಿಗಳಂತೆ ಕಾಣುವುವು.

ವಿಶ್ವಾವಸು—ನಕ್ಕು ಸುತ್ತಲೂನೋಡಿ ಪೇಳಿದನು. ಈ ಚೋಳದೇಶವು ಬಹಳ ರಮಣೀಯವಾಗಿರುವುದು.

ಇಲ್ಲಿ ಅತಿರಾತ್ರಜ್ಯೋತಿಷ್ಟೋಮವಾಜಪೇಯಪೌಂಡರೀ ಕಾದಿ ಮಹಾಯಜ್ಞಗಳು ಯಾವಾಗಲೂ ಆಚರಿಸಲ್ಪಡು ವವು. ಪ್ರತಿ ಒಂದು ಮನೆಯಲ್ಲಿಯೂ ಅಗ್ನಿಹೋತ್ರವನ್ನು ಆಚರಿಸಿ, ಶಾಸ್ತ್ರಗಳೆಂಬ ಔಷಧಗಳಿಂದ ನಿರ್ಮಲವಾದ ಹೃದ ಯವುಳ್ಳ ವೇದೈಕಧನರಾದ ಪಂಡಿತಶ್ರೇಷ್ಠರು ಸರ್ವೋತ್ಕ ರ್ಷದಿಂದ ಪ್ರಕಾಶಿಸುವುದಲ್ಲದೆ ಲೋಕವನ್ನು ಪಾವನಮಾ ಡುವರು.

ಕೃಶಾನು—ಈ ಚೋಳದೇಶವನ್ನು ಹೆಚ್ಚಾಗಿ ಹೊಗ ಳಬೇಡ. ಇಲ್ಲಿರುವ ಸತ್ಪುರುಷರಲ್ಲಿಯೂ ಅನೇಕ ದುರಾ ಚಾರಗಳು ಕಾಣುವವು. ಈ ದೇಶದ ಬ್ರಾಹ್ಮಣರು ಪ್ರಾತಃ ಕಾಲದಲ್ಲಿ ಕಾವೇರೀನದಿಯಲ್ಲಿ ಸ್ನಾನಮಾಡಿ, ವಿಧ್ಯುಕ್ತವಾಗಿ ಸಂಧ್ಯಾದಿಕರ್ಮವನ್ನಾಚರಿಸಿ, ದರ್ಶಪೂರ್ಣಮಾಸಾದಿಗಳ ನ್ನೂ ಮಾಡಿ, ಶಾಸ್ತ್ರಗಳನ್ನು ಓದಿ, ಆದಿತ್ಯಾಂಬಿಕಾವಿಷ್ಣುಗ ಣನಾಥಮಹೇಶ್ವರರನ್ನು ದಿವ್ಯಕುಸುಮಗಳಿಂದ ಪೂಜಿಸಿ ಅತಿಥಿಗಳನ್ನು ಸೇವಿಸಿ, ಪರ್ಯುಷಿತಾನ್ನವನ್ನು ತಿನ್ನುವರು! ಆದಕಾರಣ ಇವರ ನಡತೆಯು ಒಳ್ಳೆಯದಲ್ಲ. ಇನ್ನೂ ಚೆನ್ನಾಗಿ ಕೇಳು. ಈ ದೇಶದ ನಾರಿಯರಿಗೆ ಲಾವಣ್ಯವಿದ್ದರೂ ಲಜ್ಜೆಯಿಲ್ಲ. ಅಶನವಸನಾದಿಗಳಿಗೆ ಭಗವಂತನು ಅನುಕೂ ಲಮಾಡಿದ್ದರೂ ಈ ಚೋಳನಾರಿಯರು ಕಂಚುಕಬಂಧನವಿ ಲ್ಲದೆ ಸಂಚರಿಸುವರು. ಪ್ರಥಮಾರ್ತವಕಾಲದಲ್ಲಿ ಅನೇಕ ನಾರಿಯರು ಸೇರಿ ರತಿಪ್ರಯುಕ್ತವಾದ ಗ್ರಾಮ್ಯಶಬ್ದಗಳ ನ್ನುಚ್ಚರಿಸಿ ತಮ್ಮ ಸ್ತನಕಲಶಗಳನ್ನು ಪ್ರಕಟಿಸುವದರಿಂದ ನಿಷ್ಕಲ್ಮಷರಾದ ಮುನಿಗಳಿಗೂ ಧೈರ್ಯಕ್ಷೋಭೆಯುಂಟಾ

ಗುವದು. ಋಷಿಜನಕ್ಕೇಹೀಗಾಗುವಲ್ಲಿ ಕಾಮುಕರವಿಷಯು ದಲ್ಲಿ ಹೇಳತಕ್ಕದೇನು ?

ವಿಶ್ವಾವಸು.—ಎಲೈ ! ಸಖನೆ ಚೋಳದೇಶೀಯರನ್ನು ವ್ಯರ್ಥವಾಗಿ ನಿಂದಿಸಬೇಡ. ಕಾವೇರೀತೀರ್ಥದಿಂದ ಪ್ರೋಕ್ಷಿತವಾಗಿಯೂ, ಸ್ವಾಮಿಗೆ ನಿವೇದಿತವಾಗಿಯೂ, ಬೆಕ್ಕು, ನಾಯಿ ಮೊದಲಾದವು ಮುಟ್ಟದಹಾಗೆ ಸುರಕ್ಷಿತವಾಗಿಯೂ, ಘೃತತೈಲಸಮನ್ವಿತವಾಗಿಯೂ ಇರುವ ಪರ್ಯುಷಿತಾನ್ನವನ್ನು ತಿಂದರೆ ದೋಷವೇನು ? ಎಂದುನುಡಿದು ಮುಂದೆ ಪಕ್ಕದಲ್ಲಿ ನೋಡಿ ವಿಶ್ವಾವಸುವು ಮರಳಿ ಹೇಳಲುಪಕ್ರಮಿಸಿದನು.

ಈ ದೇಶವು ಎಷ್ಟು ಧನ್ಯವಾದುದು! ಮಲ್ಲಿಗೆ ಹೂವಿನಂತೆ ಮೃದುವಾದ ಫಣಿತಲ್ಪದಲ್ಲಿ ಯೋಗನಿದ್ರೆಯನ್ನು ಅವಲಂಬಿಸಿರುವ ಸರ್ವಾಂತರ್ಯಾಮಿಯಾದ ದೇವತಾಸಾರ್ವಭೌಮನಾದ ಶ್ರೀ ವಿಷ್ಣುವು ಕುಂಭಕೋಣಕ್ಷೇತ್ರದಲ್ಲಿ ವಿಲಸಿಸುತ್ತಿರುವನು. ಈ ಪುಣ್ಯಕ್ಷೇತ್ರದ ಬ್ರಾಹ್ಮಣರು ಪ್ರಾತಃಕಾಲದಲ್ಲಿ ಕಾವೇರಿಯಲ್ಲಿ ಸ್ನಾನಮಾಡಿ, ಜಪಾದಿನಿಯಮಗಳಿಂದ ಪರಿಶುದ್ಧರಾಗಿ, ವೇದಪಾರಾಯಣವಂಮಾಡಿ, ಸಂಸಾರರೋಗನಿವಾರಕನಾದ ಶ್ರೀ ನಾರಾಯಣನನ್ನು ಭಕ್ತಿಯಿಂದ ನುತಿಸಿ ನಮಸ್ಕರಿಸಿ ಕಾಲವಂ ಕಳೆಯುವರು. ಯಮುನಾನದೀತೀರದಲ್ಲಿ ಗೋಪಿಕಾಲೋಲನಾಗಿ ವಿಹರಿಸುತ್ತಿದ್ದ ಶ್ರೀ ಕೃಷ್ಣಮೂರ್ತಿಯು ಚಂಪಕಾರಣ್ಯವೆಂಬ ಕ್ಷೇತ್ರದಲ್ಲಿ ಅಚಂಚಲಭಕ್ತವಾತ್ಸಲ್ಯದಿಂದೊಪ್ಪುತ್ತಿರುವನು. ಆವ ಶ್ರೀಕೃಷ್ಣಮೂರ್ತಿಗೆ ಸೂರ್ಯಚಂದ್ರರೇ ನೇತ್ರಗಳೋ, ಫಣಿಪತಿಯೇ ಶಯನವೋ, ಪಕ್ಷಿಪತಿಯೇ ವಾಹನವೋ ಅಂ

ತಹ ಪರಮಾತ್ಮನಿಗೂ ಆತನ ಪುಣ್ಯಕ್ಷೇತ್ರಗಳಿಗೂ ನಮಸ್ಕಾರ.

ಕೃಶಾನು.—ಈ ಪುಣ್ಯಕ್ಷೇತ್ರಗಳನ್ನು ನಮಸ್ಕರಿಸುವುದು ನನಗೆ ಇಷ್ಟವಲ್ಲ. ಕಾರಣವೇನೆಂದರೆ:—ಈ ದೇವಲಕರು ಅತಿದುರಾಚಾರಪರರಾಗಿರುವರು. ವಾರನಾರಿಯರ ಕುಚಮರ್ದನವಂ ಮಾಡಿದ ಕರಗಳಿಂದ ದೇವರಿಗೆ ಅರ್ಘ್ಯಾದಿಗಳನ್ನು ಕೊಡುವರು. ಆ ವಾರವಿಲಾಸಿನಿಯರು ಚರ್ವಿಸಿದ ತಾಂಬೂಲರಸದಿಂ ಸುರಭಿತವಾದ ತಮ್ಮ ವಕ್ತ್ರಗಳಿಂದ ಮಂತ್ರಗಳನ್ನುಚ್ಚರಿಸುವರು. ಸ್ವಾಮಿ ಪ್ರೀತ್ಯರ್ಥವಾಗಿ ಭಕ್ತರು ಕೊಟ್ಟಹಣವನ್ನು ಪರಲೋಕಭೀತಿಯಿಲ್ಲದೆ ಕದಿಯುವರು. ಇಂತಹ ನೀಚರು ಪೂಜಿಸುವ ವಿಗ್ರಹಗಳಲ್ಲಿ ಹರಿಹರರೆಲ್ಲಿರುವರು ? ಈ ದೇವಲಕರು ಹಗಲಿರಳೂ ಸೂಳೆಯರ ಕಥೆಗಳನ್ನು ಹೇಳುವರೇ ಹೊರತು ಸಂಧ್ಯಾವಂದನಾದಿ ಕರ್ಮವನ್ನು ಮಾಡುವುದಿಲ್ಲ. ಇತರರನ್ನು ವಂಚಿಸಿ ಹಣವನ್ನು ಕೂಡಿಹಾಕುವ ದಾರಿಗಳನ್ನು ಹುಡುಕುವರೆ ಹೊರತು ವೇದಾಕ್ಷರವನ್ನೆಂದಿಗೂ ಉಚ್ಚರಿಸುವದಿಲ್ಲ. ಇಂತಹ ಜಾರಚೋರರೂ, ದುಷ್ಕುಲೋತ್ಪನ್ನರೂ, ದುರಾಚಾರಿಗಳೂ ಆದ ದೇವಲಕರು ಪಕ್ವಮಾಡಿದ ಅನ್ನಸೂಪಾದಿಗಳನ್ನು ಸ್ವಾಮಿಯು ಹೇಗೆ ಅಂಗೀಕರಿಸುವನೋ ನಾನರಿಯೆ! ಅಯ್ಯೋ! ಕಲಿಪ್ರಾಬಲ್ಯದಿಂದ ಜನರು ಬಹಳ ಅವಿವೇಕಿಗಳಾಗಿರುವರು. ಶಿಷ್ಟಬ್ರಾಹ್ಮಣರಿಂದ ಮನೆಯಲ್ಲಿ ಶ್ರದ್ಧಾಭಕ್ತಿಪೂರ್ವಕವಾಗಿ ಸ್ವಾಮಿಗೆ ನಿವೇದಿತವಾದ ಅನ್ನವನ್ನು ತಿನ್ನದ ಕೆಲಜನರು ವಯೋವೃದ್ಧರಾದರೂ ಜ್ಞಾನವಿಲ್ಲದೆ

ದೇವಾಲಯಗಳಲ್ಲಿ ಸಂಸ್ಕಾರಹೀನರು ಪಕ್ವಮಾಡಿದ, ಪತಿತರು ಮುಟ್ಟಿದ ಅನ್ನವನ್ನು ಎಲ್ಲರ ಮುಂದೆ ನಿರ್ಭಯವಾಗಿ ತಿನ್ನುವರು.

ವಿಶ್ವಾವಸು.—ಪುಣ್ಯಕ್ಷೇತ್ರಗಳ ಮಹಿಮೆಯನ್ನು ತಿಳಿದ ನಮ್ಮಂತಹ ಜನರಿಗೆ ನೀನು ಮಾಡುವ ದೂಷಣೆಯು ಸಮ್ಮತವಲ್ಲ. ಈ ದೇವಲಕರು ಸ್ವಮತಸಂಬಂಧಶಾಸ್ತ್ರಗಳಲ್ಲಿ ನಿಪುಣರಾಗಿ, ಪ್ರಾತಃಕಾಲದಲ್ಲಿ ಸ್ನಾನಮಾಡಿ ಜನರನ್ನು ರಕ್ಷಿಸುವುದಕ್ಕೋಸ್ಕರ ಪರಮಪುರುಷನನ್ನು ಪವಿತ್ರವಾದ ಅನ್ನದಿಂದ ವಿಧ್ಯುಕ್ತವಾಗಿ ಆರಾಧಿಸುವರು.

ಎಲೈ ಕೃಶಾನುವೆ! ನಿನ್ನ ದೂಷಣೆಯನ್ನಂಗೀಕರಿಸಿದರೂ ಈ ದೇಶದ ದೇವಲಕರು ಸ್ವಾಮಿಯನ್ನು ಶುದ್ಧರಾಗಿಯೂ, ಭಕ್ತಿಯುಕ್ತರಾಗಿಯೂ, ವಿಧ್ಯುಕ್ತವಾಗಿಯೂ ಪೂಜಿಸಲಿ; ಅಥವಾ ಅಶುದ್ಧರಾಗಿಯೂ ಭಕ್ತಿರಹಿತರಾಗಿಯೂ ಅವಿಧಿಯಿಂದಲಾದರೂ ಪೂಜಿಸಲಿ; ಪ್ರತಿದಿನವೂ ಇಂದ್ರಾದಿದೇವತೆಗಳು ಇಲ್ಲಿಗೆ ಬಂದು ಸ್ವಾಮಿಯನ್ನು ಭಕ್ತಿಯೊಡನೆ ಪೂಜಿಸುವಲ್ಲಿ ಪ್ರತಿಮೆಗಳಲ್ಲಿ ದೇವತ್ವವಿಲ್ಲವೆ? ಕೆಲವರು ಭಗವದ್ಭೀತರಾಗಿ ಶುದ್ಧರಾಗಿ ಜಾಗರೂಕತೆಯಿಂದ ಅನ್ನವನ್ನು ಬೇಯಿಸುವರು. ಮತ್ತೆ ಕೆಲವರು ರಾಜಭಯದಿಂದ ಶ್ರದ್ಧೆಯೊಡನೆ ಪಾಕಮಾಡುವರು. ಇಂತಹ ನಿವೇದನಾನ್ನವನ್ನು ಸ್ವಾಮಿಯು ಸಂತೋಷದಿಂದ ಸ್ವೀಕರಿಸುವನು. ದೇವಾಲಯದಲ್ಲಿ ನಿವೇದಿತವಾದ ಅನ್ನಕ್ಕೂ ಶಿಷ್ಟರ ಗೃಹಗಳಲ್ಲಿ ನಿವೇದಿತವಾದ ಅನ್ನಕ್ಕೂ ಇರುವ ಉತ್ಕರ್ಷನಿಕರ್ಷಗಳು ಸರ್ವಾನುಭವಸಿದ್ಧವಾಗಿರುವಲ್ಲಿ

ಆಕ್ಷೇಪಣೆಗೆ ಅವಕಾಶವೆಲ್ಲಿಯದು? ಮಹನೀಯರು ಶಿಷ್ಟ ರಮನೆಯಲ್ಲಿ ನಿವೇದಿತವಾದ ಅನ್ನವು ಸರ್ವರಸಭರಿತವಾದರೂ ಭೋಜನಾರ್ಹವಲ್ಲವೆಂದು ಅದನ್ನು ತಿರಸ್ಕರಿಸುವರು. ದೇವಾಲಯದಲ್ಲಿ ನಿವೇದಿತವಾದ ಅನ್ನವು ರಸಲವರಹಿತವಾದರೂ ಪಾಪಹರವಾಗಿಯೂ, ಭೋಜನಾರ್ಹವಾಗಿಯೂ ಇರುವದರಿಂದ ಅದನ್ನು ಪುರಸ್ಕರಿಸುವರು. ದೇವರಮನೆಯಲ್ಲಿರುವ ಜನರು ಆಚಾರಯುಕ್ತರಾಗಲಿ ಆಚಾರಹೀನರಾಗಲಿ ದೇವತಾಸಾನ್ನಿಧ್ಯದಿಂದ ಮಹನೀಯರಿಗೆ ಮಹನೀಯರಾಗಿರುವುರು. ಪ್ರಾಯಶಃ ಮಹದಾಶ್ರಯದ ದೆಸೆಯಿಂದ ನೀಚನೂ ಕೂಡ ಉಚ್ಚನಂತೆ ಗಣ್ಯನಾಗುವನು. ರಾಜಾಶ್ರಯದಿಂದ ಮೋಟನೂ ಷಂಡನೂ ಕೂಡ ಬಹುಮಾನವಂ ಪಡೆಯುವರು. ಹೀಗೆ ಹೇಳಿ ಮುಂದೆ ಪ್ರಯಾಣಮಾಡಿ ಸಂತೋಷದೊಡನೆ ಹೇಳತೊಡಗಿದನು. ಪಾಪಿಷ್ಠರನ್ನು ರಕ್ಷಿಸುವುದಕ್ಕೂ, ಅಜ್ಞಾನಾಂಧಕಾರವನ್ನು ನಾಶಮಾಡುವುದಕ್ಕೂ, ಲಂಕಾಪುರಿಯನ್ನು ಪ್ರವೇಶಿಸುವುದಕ್ಕೂ, ರಾವಣಾದಿ ಶತ್ರುಗಳನ್ನು ಸಂಹರಿಸುವುದಕ್ಕೂ, ವಿರಹಾಗ್ನಿಸಂತಪ್ತಳಾದ ಸೀತಾದೇವಿಯ ಶೋಕವನ್ನು ಪರಿಹರಿಸಿ ಸಂತೋಷವನ್ನುಂಟುಮಾಡುವುದಕ್ಕೂ, ಶಾಶ್ವತವಾದ ಸ್ವಚ್ಛಂದಕೀರ್ತಿಯನ್ನು ಪಡೆಯುವುದಕ್ಕೂ ಸರ್ವಭೂತಗಳಿಗೂ ಸುಖವನ್ನುಂಟುಮಾಡುವುದಕ್ಕೂ ಇನಕುಲಚಂದ್ರನಾದ ಶ್ರೀರಾಮನಿಂದ ನಿರ್ಮಿತವಾದ ಈ ಸೇತುವಿಗೆ ವಂದನೆಯಂಮಾಡುವೆನು.

ಸ್ವಭಾವದಿಂದಲೆ ಕಠಿನವಾದ ಪರ್ವತಗಳಿಗೂ ಸೀತಾದೇವಿಯ ವಿಷಯದಲ್ಲಿ ಅಧಿಕಪ್ರೀತಿಯಿರುವುದು. ಲಂಕಾ

ಪುರಿಯಲ್ಲಿ ರಾವಣನ ಹಿಂಸೆಗೆ ಗುರಿಯಾದ ಸೀತೆಯನ್ನು ಪತಿಯಾದ ರಾಮನ ಸನ್ನಿಧಿಯಂ ಹೊಂದಿಸಲು ಸೇತುಗಳಾಗಿ ಸಮುದ್ರದ ಮೇಲೆ ಪರ್ವತಗಳು ತೇಲಾಡುತ್ತಿರುವವು. ಈ ಪ್ರೀತಿಗೆ ತಾವು ಧರಿಸಿರುವ ಭೂಮಿಯಲ್ಲಿ ಸೀತೆಯು ಹುಟ್ಟಿದಳೆಂಬ ವ್ಯಾಜವೇ ಕಾರಣವು; ಎಂದು ರಾಮಸೇತುವನ್ನು ವರ್ಣಿಸುತ್ತಾ ತಾಮ್ರಪರ್ಣೀತೀರಕ್ಕೆ ಬಂದು ಕೃಶಾನುವನ್ನು ಕುರಿತು ಹೇಳಿದನದೆಂತೆಂದರೆ:—

ಸಮುದ್ರನಿಗೆ ಅಂತಃಪುರಸ್ತ್ರೀಯಾಗಿಯೂ, ಲೋಕತ್ರಯವಿದಿತವಾಗಿಯೂ, ತಪೋಧನರಾದ ಮಹರ್ಷಿಗಳಿಂದೊಪ್ಪುತ್ತಿರುವ ತಟಗಳಿಂ ಶೋಭಿತವಾಗಿಯೂ ಇರುವ ತಾಮ್ರಪರ್ಣೀನದಿಯು ಭವಾನಲಸಂತಪ್ತರಾದ ಮನುಷ್ಯರ ಆಧಿವ್ಯಾಧಿಗಳನ್ನು ನಿಶ್ಶೇಷವಾಗಿ ನಾಶಮಾಡುವುದು. ಪೂರ್ವದಲ್ಲಿ ಈ ತಾಮ್ರಪರ್ಣೀತೀರದಲ್ಲಿ ದ್ರವಿಡಪ್ರಬಂಧಕಾರನಾದ ಶಠಕೋಪನೆಂಬ ಮುನಿಯು ಚಿಂಚಾತರುಮೂಲದಲ್ಲಿ ತಪಸ್ಸು ಮಾಡುತ್ತಿದ್ದನು. ಈಗಲೂ ಅನೇಕಯತಿಗಳು ಶಠಕೋಪಮುನಿಪ್ರಣೀತವಾದ ಪ್ರಬಂಧವನ್ನು ಪಠಿಸುತ್ತಲೂ, ಹರಿಯನ್ನು ಸೇವಿಸುತ್ತಲೂ, ಭಕ್ತರನ್ನು ಅನುಗ್ರಹಿಸುತ್ತಲೂ, ವೇದಪಾರಾಯಣವಂ ಮಾಡುತ್ತಲೂ ಕುರುಕಾಪುರಿಯನ್ನು ಪಾವನಮಾಡುತ್ತಲೂ ವಿಲಸಿಸುತ್ತಿರುವರು.

ಎಲೈ ಪಾಪಬುದ್ಧಿಯಾದ ಕೃಶಾನುವೆ! ಇಂತಹ ಸತ್ಪುರುಷರನ್ನು ನಮಸ್ಕರಿಸಿ ನಿಷ್ಕಲ್ಮಷನಾಗು.

ಕೃಶಾನು.—ಎಲೈ ಸಖನೆ! ಶ್ರುತಿಸ್ಮೃತಿ ವಿಹಿತವಾದ ಧರ್ಮಗಳನ್ನು ಬಿಟ್ಟಿರುವ ಈ ಕಪಟಯತಿಗಳನ್ನು ಕನಸಿ

ನಲ್ಲಿಯೂ ನೋಡಬಾರದು. ಈ ಯತಿಗಳು ಸಂಧ್ಯಾಕಾಲಗಳಲ್ಲಿ ಸ್ನಾನಮಾಡುವುದಿಲ್ಲ. ಕಮಂಡಲುವನ್ನು ಮುಟ್ಟುವದೇ ಇಲ್ಲ. ಭಿಕ್ಷಾಟನೆಯಂ ಮಾಡುವದೇ ಇಲ್ಲ. ಧನಲೋಭವನ್ನು ಬಿಡುವದಿಲ್ಲ. ವೇದಮಾರ್ಗವನ್ನೇ ಅರಿಯರು. ಇಷ್ಟೇಅಲ್ಲ. ಸನ್ಯಾಸಾಶ್ರಮದಲ್ಲಿರುವ ಈ ಯತಿಗಳು ಲೌಕಿಕವ್ಯಾಪಾರಪರಾಙ್ಮುಖರಾಗಿರಬೇಕಾದುದು ಶಾಸ್ತ್ರೀಯವು. ಹಾಗೆ ಮಾಡದೆ ಈ ಯತಿಗಳು ಹರಿಸೇವೆ ಎಂಬ ವ್ಯಾಜದಿಂದ ದೊಡ್ಡದೊಡ್ಡ ಪಟ್ಟಣಗಳನ್ನು ಹೊಕ್ಕು ಹೇರಳವಾಗಿ ಹಣವನ್ನು ಕೂಡಿಹಾಕಿ ಮಠವನ್ನು ಉದ್ಧಾರಮಾಡಿ ಷಡ್ರಸೋಪೇತವಾದ ಅನ್ನವನ್ನು ತಿನ್ನುವರು. ರಾಮ ರಾಮ! ಇಂತಹ ಪಾಪಿಷ್ಠರಾದ ಯತಿಗಳ ನಡತೆಯನ್ನು ಯಾರುತಾನೇ ಸೈರಿಸಲಾಪರು? ಈ ವೈಷ್ಣವ ಯತಿಗಳು ಗೃಹಸ್ಥರಿಗೆ ನಮಸ್ಕಾರಮಾಡುವರು. ಇದು ಎಷ್ಟು ಅನ್ಯಾಯ್ಯ! ಇದಲ್ಲದೆ ವೈಷ್ಣವಬ್ರಾಹ್ಮಣರು ಸಾತಾನಿಗಳೆಂಬ ಆಂಧ್ರಶೂದ್ರರಿಗೆ ಅವರು ವಿಷ್ಣುಭಕ್ತರೆಂದು ನಮಸ್ಕಾರ ಮಾಡುವರು. ಇದು ಬಹಳ ಕರ್ಣಕಠೋರವಾದ ವಾರ್ತೆಯಾಗಿರುವದು.

ವಿಶ್ವಾವಸು.—ಮಿತ್ರನೇ! ಹೀಗೆ ನುಡಿಯಬೇಡ. ಈ ಯತಿಗಳು ಸ್ನಾನಸಂಧ್ಯಾದಿಗಳನ್ನು ಬಿಟ್ಟರೂ ಬಿಡಲಿ; ಭಿಕ್ಷಾಟನೆಯನ್ನೂ ಬಿಡಲಿ; ಹರಿಕೈಂಕರ್ಯನಿರತರಾದ ಈ ಯತಿಗಳಿಗೆ ಪಾಪಸಂಪರ್ಕವೆಲ್ಲಿಯದು? ಕೆಲವರು ಯತಿಗಳು ಹರಿಕೈಂಕರ್ಯಕ್ಕೋಸ್ಕರವೇ ದೇಶಾಟನೆಯಂ ಮಾಡುವರು. ಅಂತಹ ಧನ್ಯರು ನಿಸ್ಪೃಹರೆಂದು ಹೇಳುವದರಲ್ಲಿ ಸಂದೇಹವೇ ಇಲ್ಲ.

ಆವನಾದರೂ ಒಬ್ಬ ಮನುಷ್ಯನು ಸಂತಾನಪ್ರಾಪ್ತಿಗಲ್ಲದೆ ಕೇವಲಭೋಗಾಶೆಯಿಂದ ಮದುವೆ ಮಾಡಿಕೊಂಡರೂ, ಸ್ವರ್ಗಪ್ರಾಪ್ತಿಗಲ್ಲದೆ ಕೇವಲಯಶೋರ್ಥವಾಗಿ ಯಜ್ಞಗಳನ್ನು ಮಾಡಿದರೂ, ಅತಿಥಿಜನಕ್ಕಲ್ಲದೆ ಕೇವಲ ಸ್ವೋದರಪೂರಣೆಗೋಸುಗ ಪಾಕಮಾಡಿದರೂ, ಧರ್ಮಕ್ಕೋಸ್ಕರವಲ್ಲದೆ ಕೇವಲದುರ್ವಿಷಯಗಳಲ್ಲೂ, ದುಷ್ಪಾತ್ರಗಳಲ್ಲೂ ವಿನಿಯೋಗಿಸಲು ಹಣವನ್ನು ಸಂಪಾದಿಸಿದರೂ, ಬ್ರಹ್ಮಲೋಕಪ್ರಾಪ್ತಿಗಲ್ಲದೆ ಕೇವಲಪ್ರತಿಗ್ರಹಾರ್ಥವಾಗಿ ವೇದಗಳನ್ನೋದಿದರೂ, ಜ್ಞಾನವೃದ್ಧಿಗಲ್ಲದೆ ಕೇವಲವಿವಾದಾರ್ಥವಾಗಿ ಶಾಸ್ತ್ರವನ್ನು ಕಲಿತರೂ, ಪುಣ್ಯಸಂಪಾದನೆಗಲ್ಲದೆ ಉದರಭರಣೆಗಾಗಿ ಹರಿಕೈಂಕರ್ಯವಂ ಮಾಡಿದರೂ ದೂಷಣೆಗೀಡಾಗುವನು. ಈ ದೇಶದಲ್ಲಿರುವ ಯತಿವರ್ಯರಲ್ಲಿ ಪೂರ್ವೋಕ್ತದೋಷಗಳಲ್ಲಾವುದೂ ಕಾಣದಿರಲು ಅವರನ್ನು ದೂಷಿಸುವುದೇಕೆ? ಸ್ವಾಮಿಯಲ್ಲಿ ಅಚ್ಛಿನ್ನವಾದ ಭಕ್ತಿಯುಳ್ಳವನು ಸ್ವಧರ್ಮತ್ಯಾಗಾದಿದೋಷದೂಷಿತನಾದರೂ ಸಾತ್ವಿಕರು ಅವನನ್ನು ಸಮ್ಮಾನಿಸುವರು. ಪರಿಮಳಯುಕ್ತವಾದ ಕೇತಕೀವೃಕ್ಷವು ಮುಳ್ಳುಗಳಿಂದಲೂ ಹಾವುಗಳಿಂದಲೂ ಆವೃತವಾಗಿದ್ದರೂ ಸ್ವೀಕರಿಸಲ್ಪಡುವುದು; ಎಂದು ಹೇಳುತ್ತಾ ಮುಂದೆ ಹೊರಟು ವೇದಕರ್ಮಾನುಷ್ಠಾನದಿಂದ ವೇದಗಳ ಪ್ರಾಮಾಣಿಕತೆಯನ್ನು ನಿರ್ಧರಿಸಿ ಅನೇಕಶಿಷ್ಯರಿಗೆ ಪಾಠಗಳನ್ನು ಹೇಳಿ ವೇದಗಳನ್ನು ಪ್ರಚುರಪಡಿಸಿ, ಪಾಂಡ್ಯಚೋಳದೇಶಗಳಿಗೆ ಅಲಂಕಾರಗಳಾಗಿರುವ ಪಂಡಿತ ಮಹಾಶಯರೇ, ನಿಮಗೆ ನಮಸ್ಕಾರವೆಂದು ನುಡಿದನು.

ಕೃಶಾನು.—ಈ ಬ್ರಾಹ್ಮಣರಿಗೆ ನಮಸ್ಕಾರ ಮಾಡು ವುದು ನನಗೆ ಇಷ್ಟವಲ್ಲ. ಕಾರಣವೇನೆಂದರೆ:—ಇವರಲ್ಲಿ ಮಿಥ್ಯಾವಾದಿಗಳೇ ಅನೇಕರಿರುವರು. ಇವರು ಪ್ರತ್ಯಕ್ಷವಾಗಿ ಕಾಣುವ ಜಗತ್ತು ಇಲ್ಲವೆಂದೂ, "ಯತೋವಾಚೋನಿವ ರ್ತಂತೇ" "ಅಪ್ರಾಪ್ಯಮನಸಾಸಹ," ಇತ್ಯಾದಿಸಕಲ ಪ್ರಮಾಣಗಳಿಂದಲೂ ಅಗಮ್ಯವಾದ ಬ್ರಹ್ಮವೊಂದೇ ಇರು ವದೆಂದೂ ವಾದಿಸುವರು.

ಸರ್ವಜ್ಞನೂ, ನಿಷ್ಕಳಂಕನೂ, ಸಂಸಾರದುಃಖನಿವ ರ್ತಕನೂ ಆದ ಪರಬ್ರಹ್ಮನಿಗೂ ಕಿಂಚಿದ್ಜ್ಞನೂ, ಸಂಸಾರ ಸುಖದುಃಖಾನುಭವಶೀಲನೂ ಆದ ಜೀವನಿಗೂ ಎಳ್ಳಷ್ಟು ಭೇದವಿಲ್ಲವೆಂದು ಹೇಳುವರು. ಇದು ದೈವದ್ರೋಹವಲ್ಲವೆ? ವೇದಗಳಲ್ಲಿ ಸಗುಣನಿರ್ಗುಣಪ್ರತಿಪಾದಕವಾದ ವಾಕ್ಯಗ ಳೊಂದಿಗೆ ಸೇರಿದ ಕರ್ಮಕಾಂಡವು ಅಸತ್ಯವಾದ ಕರ್ಮ ಗಳನ್ನು ಬೋಧಿಸುತ್ತದೆ ಎಂದು ಅಪ್ರಾಮಾಣ್ಯವಾಗಿ ಮಾಡಲ್ಪಟ್ಟು ಬ್ರಹ್ಮವೆಂಬ ಒಂದು ಶಬ್ದಮಾತ್ರ ಉಳಿಸ ಲ್ಪಟ್ಟಿತು. ಈ "ಬ್ರಹ್ಮ" ಎಂಬ ಶಬ್ದದ ಮೇಲಿನ ವಿಭಕ್ತಿ ಯು (ನಪುಂಸಕವಿಭಕ್ತಿ) ಸಕಲಚೈತನ್ಯನಿಲಯನಾದ ಬ್ರ ಹ್ಮನು ಅಚೇತನನೆಂದು ತಿಳಿಸುತ್ತದೆ. ಹಾಗಲ್ಲದೆ ಆ ಬ್ರಹ್ಮ ವೆಂಬ ಶಬ್ದವು ಕೇವಲಪ್ರಕೃತಿರೂಪವೆಂದು ಹೇಳಿದರೆ ವಾಚ್ಯವನ್ನು ಬೋಧಿಸುವ ಶಕ್ತಿಯಿಲ್ಲದೆ ಪರಬ್ರಹ್ಮನನ್ನು ಬೋಧಿಸಲಾರದು. ಹೀಗಿರಲು ಇವರು ಉಪನಿಷತ್ತುಗಳ ಪ್ರಾಮಾಣ್ಯವನ್ನು ಹೇಗೆ ಗ್ರಹಿಸುವರು? ಇವರು ವ್ಯಾಸ ಮಹರ್ಷಿಪ್ರಣೀತವಾದ ವೇದಾಂತಶಾಸ್ತ್ರಕ್ಕೂ ದ್ರೋಹ

ಮಾಡುವರು. ಈ ಅದ್ವೈತಿಗಳು ಪರಬ್ರಹ್ಮವು ಅವಾಙ್ಮಾನಸಗೋಚರವಾದುದೆಂದು ಹೇಳುವುದರಿಂದ ವ್ಯಾಸಕೃತಬ್ರಹ್ಮಸೂತ್ರಗಳೂ ಅಸಮಂಜಸವಾದವು. ಪರಮೇಶ್ವರನ ಸತ್ಯಸ್ವಭಾವವನ್ನರಿಯದ ಅದ್ವೈತಿಗಳು ಭಗವಂತನು ಸರ್ವಜ್ಞನಾದರೂ ಅಜ್ಞನೆಂದೂ, ಸರ್ವಶಬ್ದವಾಚ್ಯನಾದರೂ ಅವಾಚ್ಯನೆಂದೂ, ಸಕಲಗುಣಾಕರನಾದರೂ ನಿರ್ಗುಣನೆಂದೂ, ವೇದವೇದ್ಯನಾದರೂ ಅವೇದ್ಯನೆಂದೂ ಹೇಳುವರು. ಅನೇಕ ವಿಧವಾದ ದುಷ್ಕರ್ಮಗಳನ್ನು ಮಾಡಿ ಅವುಗಳ ಫಲರೂಪವಾದ ದುಃಖಸಾಗರದಲ್ಲಿ ಮುಳುಗಿಮುಳುಗಿ ಸಂಕಟಪಡುತ್ತಿರುವ ಕಿಂಚಿದ್ಜ್ಞನಾದ ಜೀವನಿಗೂ ಆನಂದಸಿಂಧುವಾದ ಪರಮೇಶ್ವರನಿಗೂ ಅಭೇದವನ್ನು ಪ್ರತಿಪಾದಿಸುವ ಈ ಅದ್ವೈತಿಗಳು ಬಾಲಮಶಕಕ್ಕೂ ಮತಂಗಜಕ್ಕೂ ಅಭೇದವನ್ನೇಕೆ ಹೇಳುವದಿಲ್ಲ? ದೃಶ್ಯವಾದ ರಜ್ವಾದಿಗಳೂ, ದೃಷ್ಟಿಕರ್ತನಾದ ಚೈತ್ರಮೈತ್ರಾದಿಪುರುಷನೂ, ಭ್ರಮಕಾರಣವಾದ ಪಿತ್ಥಾದಿದೋಷವೂ ಈ ಮೂರೂ ಮಿಥ್ಯೆ ಎಂದು ಹೇಳುವ ಈ ಪಂಡಿತರ ಬುದ್ಧಿಯು ಸರ್ವಾಶ್ರಯನಾದ ಪರಬ್ರಹ್ಮನನ್ನು ಮಿಥ್ಯೆ ಎಂದು ಏತಕ್ಕೆ ಭಾವಿಸಲಾರದು ?

ವಿಶ್ವಾವಸು.—ಬ್ರಾಹ್ಮಣರನ್ನು ಹೀಗೆ ನಿಂದಿಸಬೇಡ. ವಂಶಪಾರಂಪರ್ಯದಿಂದ ಬಂಧ ಸಂಪ್ರದಾಯಗಳನ್ನುಬಿಡಬಾರದೆಂದೆಣಿಸಿ, ಅದ್ವೈತಮತವನ್ನವಲಂಬಿಸಿ "ಬ್ರಹ್ಮವು ಸತ್ಯ; ಜಗತ್ತು ಮಿಥ್ಯೆ;" ಎಂದು ಹೇಳಿ ಆಮೂಲಾಗ್ರವಾಗಿ ವೇದಗಳನ್ನು ಓದಿ, ವೇದೋಕ್ತಕರ್ಮಗಳನ್ನು ಆಸ್ತಿಕ್ಯ

ದಿಂದಲೂ ಶ್ರದ್ಧೆಯಿಂದಲೂ ಆಚರಿಸುವದರಲ್ಲಿ ಚತುರರಾದ ಈ ಸ್ಮಾರ್ತರಿಗೆ ಸಮಾನರು ಯಾರು?

ಪ್ರತಿದಿನವೂ ಮಂತ್ರಗಳನ್ನು ಜಪಿಸಿ, ಬ್ರಹ್ಮಯಜ್ಞಜ್ಯೋತಿಷ್ಟೋಮಾದಿಕ್ರತುಗಳನ್ನು ನೆರವೇರಿಸಿ ಯಥಾಶಕ್ತಿ ದಾನವಂ ಮಾಡಿ ಶ್ರಾದ್ಧಕರ್ಮವನ್ನು ಯಥಾವಿಧಿಯಾಗಿ ಅನುಷ್ಠಿಸುವುದರಿಂದ ಈ ಸ್ಮಾರ್ತರು "ವೇದಗಳೇ ಪ್ರಮಾಣವು" ಎಂಬುದನ್ನು ನಿರ್ಧರಿಸಿರುವರು.

ಕೃಶಾನು—ಈ ದೇಶಗಳು ಮಹಾಖ್ಯಾತಿಯಂ ಪಡೆದಿದ್ದರೂ ಶಿವಭಕ್ತರನೇಕರಿರುವದರಿಂದ ಶ್ಲಾಘಾರ್ಹವಲ್ಲ.

ಸೂರ್ಯನಿಂದ ಆರೋಗ್ಯವನ್ನೂ, ಯಜ್ಞೇಶ್ವರನಿಂದ ಐಶ್ವರ್ಯವನ್ನೂ, ಈಶ್ವರನಿಂದ ಜ್ಞಾನವನ್ನೂ, ಮುಕುಂದನಿಂದ ಮುಕ್ತಿಯನ್ನೂ ಪಡೆಯಬೇಕೆಂಬ ಅರ್ಥವುಳ್ಳ, ವ್ಯಾಸಾದಿಮಹರ್ಷಿಪ್ರೋಕ್ತವಾದ "ಆರೋಗ್ಯಂ ಭಾಸ್ಕರಾದಿಚ್ಛೇತ್" ಇತ್ಯಾದಿ ಪುರಾಣವಾಕ್ಯಗಳನ್ನು ತಿಳಿದವರಾದರೂ ಹರ್ಯರ್ಚನೆಯಂ ಮಾಡದೆ ಶಿವೈಕಪರರಾಗಿ ಸಂಸಾರದುಃಖನಾಶನಕ್ಕೋಸುಗ ಈಶ್ವರನನ್ನು ಮಾತ್ರ ಇವರು ಪೂಜಿಸುವರು. ನಿರ್ಮಲವಾದ ಶಾಶ್ವತಸುಖಪ್ರದವಾದ ವೈಕುಂಠವನ್ನಪೇಕ್ಷಿಸದೆ, ಭೂತಭೇತಾಳಗಳಿಂದ ಭಯಂಕರವಾದ ನಶ್ವರವಾದ ಶಿವಲೋಕವನ್ನು ಹೊಂದಲು ಪ್ರಯತ್ನಪಡುವ ಈ ಶೈವರಿಗಿಂತಲೂ ಮೂಢರುಂಟೇ?

ವಿಶ್ವಾವಸು—ಸಖನೆ! ಗುಣಗಳನ್ನೂ ಗ್ರಹಿಸಬೇಕು. ನಿರ್ಮಲರಾದ ಈ ಶೈವರು ಸ್ನಾನಸಂಧ್ಯಾಹೋಮಗಳೆಂಬ ನಿತ್ಯಕರ್ಮಗಳನ್ನು ತಪ್ಪದೆ ಆಚರಿಸುವರು. ವೇದಶಾಸ್ತ್ರಗ

ಳಂ ಕಲಿಯುವರು; ಯಜ್ಞಗಳಂ ಮಾಡುವರು; ಅತಿಥಿಗಳನ್ನು ಪೂಜಿಸುವರು; ಸಾಂಬಮೂರ್ತಿಯನ್ನು ಅತ್ಯಾದರದಿಂದ ಆರಾಧಿಸುವರು. ಇಂತಹ ಪವಿತ್ರಚರಿತ್ರರಾದ ಶೈವರಲ್ಲಿ ಒಂದೆರಡು ಅಲ್ಪದೋಷಗಳು ಕಂಡುಬಂದರೂ ಅವುಗಳನ್ನು ಸೈರಿಸಲಾರೆಯಾ? ಈ ಜನ್ಮದಲ್ಲಿ ಶೈವರು ಮಾಡುವ ಶಿವಾರ್ಚನೆಯು ಜನ್ಮಾಂತರದಲ್ಲಿ ಹರಿಭಕ್ತಿಯನ್ನುಂಟುಮಾಡುವುದು. ಜ್ಞಾನವನ್ನು ಕೊಟ್ಟು ಮೋಕ್ಷವನ್ನುಂಟುಮಾಡುವುದು. ಆದುದರಿಂದ ಈ ಜನ್ಮದಲ್ಲಿ ಶಿವನನ್ನು ಪೂಜಿಸಿದರೆ ಹಾನಿಯೇನು? ಎಳ್ಳಷ್ಟೂ ವಿಷ್ಣುದ್ವೇಷವನ್ನು ಸೈರಿಸದ ರುದ್ರಭಕ್ತಿಯೇ ಶುಭಕ್ಕೆ ಕಾರಣವು. ಜಾರರ ಸಹವಾಸವಿಲ್ಲದ ಸ್ತ್ರೀಯರೇ ಸಹಧರ್ಮಾಚರಣೆಗೆ ಯೋಗ್ಯರು. ಇನ್ನೂ ಚೆನ್ನಾಗಿ ಕೇಳು. ವಿಷ್ಣುದ್ವೇಷವು ನಾಸ್ತಿಕ್ಯವನ್ನುಂಟುಮಾಡುವುದು; ನರಕಯಾತನೆಗೆ ಗುರಿಮಾಡುವುದು ಪಾಂಡಿತ್ಯವನ್ನು ನಾಶಮಾಡುವುದು. ಆಯುಸ್ಸನ್ನು ತಗ್ಗಿಸುವುದು. ಪಾಪಗಳನ್ನು ಹೆಚ್ಚಿಸುವುದು. ಆದಕಾರಣ ವಿಷಪಾನಕ್ಕೆ ಸಮಾನವಾದ ಹರಿದ್ವೇಷವನ್ನೆಂದಿಗೂ ಮಾಡಬಾರದು.

ಕೃಶಾನು—ನೀನು ಹೇಳುವುದು ಯಥಾರ್ಥವೇಅಹುದು.

ಆದಾಗ್ಯೂ ವೇದವಿರುದ್ಧವಾದ ಕರ್ಮಾಚರಣೆಯಲ್ಲುದ್ಯುಕ್ತರಾದ ಪಂಡಾರರೆಂಬ ಪಾಷಂಡರು ಅಮಂಗಳಕರವಾದ ಮಾರ್ಗಗಳನ್ನವಲಂಬಿಸಿ ಹಣೆಯಲ್ಲಿ ತುಂಬ ಬೂದಿ ಬಳೆದುಕೊಂಡು ಜಡೆಗಳನ್ನು ಧರಿಸಿ ಶ್ರುತಿವಿಷಯಿಕವಾದ ಸಂಭಾಷಣೆಗಳಂಬಿಟ್ಟು ಪಿಶಾಚಗಳಂತೆ ಶ್ಮಶಾನಾಗ್ನಿಗೆ ಸಮಾ

ಸವಾದ ನೇತ್ರಗಳಿಂದ ಸುಡುವರೋ ಎಂಬ ಭ್ರಾಂತಿಯನ್ನುಂಟುಮಾಡುತ್ತಾ ಕತ್ತೆಗಳಂತೆ ಕೊಳಕುಕೊರಚರಾಗಿ ದಿಕ್ಕು ವಿದಿಕ್ಕುಗಳಲ್ಲಿಯೂ ಅಲೆಯುವರು.

ವಿಶ್ವಾವಸು—ಗುಣಗ್ರಾಹಿಗಳು ಇವರನ್ನು ದೂಷಿಸಬಾರದು. ಜಿತೇನ್ದ್ರಿಯರಾಗಿಯೂ ಶೀತೋಷ್ಣಸಹಿಷ್ಣುಗಳಾಗಿಯೂ ಉಪವಾಸಾದಿಗಳಿಂದ ಪರಿಶುಷ್ಕವಾದ ದೇಹವುಳ್ಳವರಾಗಿಯೂ ಪುಣ್ಯಸ್ಥಲಾಟನದಿಂದ ಪಾಪರಹಿತರಾಗಿಯೂ ಇರುವ ಈ ಜಟಾಧಾರಿಗಳಲ್ಲಿ ಶ್ರೇಷ್ಠವಾದ ಗುಣಗಳನ್ನೂ ಗ್ರಹಿಸು ಎಂದು ನುಡಿದು ಸುತ್ತಲೂ ನೋಡಿ “ಇವರು ಯಾರು? ಪ್ರಾತಃಕಾಲದಲ್ಲಿ ಪಂಚಾಙ್ಗವನ್ನು ಹಿಡಿದುಕೊಂಡು ಅಲ್ಲಲ್ಲಿ ತಿರುಗುತ್ತಿರುವರು.”

ಕೃಶಾನು—ಚೆನ್ನಾಗಿನೋಡಿ ನಕ್ಕು:-ಅನೇಕ ವಿಧವಾದ ಉತ್ಸರ್ಗಾಪವಾದಗಳೆಂಬ ತರಂಗಗಳಿಂದ ನಿಬಿಡವಾದ ಜ್ಯೋತಿಶ್ಶಾಸ್ತ್ರವೆಂಬ ಮಹಾಸಾಗರದಲ್ಲಿ ಒಂದೆರಡು ಬಿಂದುಗಳನ್ನು ಮಾತ್ರ ಕಲಿತು, ತಾವು ಆ ಶಾಸ್ತ್ರದಲ್ಲಿ ಪಾರೀಣರೆಂಬ ದುರಭಿಮಾನದಿಂದ ಮೆರೆಯುತ್ತಿರುವ ಈ ಜ್ಯೌತಿಷಿಕಾಧಮರು ಮನೆಮನೆಯನ್ನೂ ಹೊಕ್ಕು. “ದೀರ್ಘಾಯುಷ್ಯಮಸ್ತು, ಅಷ್ಟಪುತ್ರ ಬಹು ಧನಮಸ್ತು, ಸಕಲೈಶ್ವರ್ಯಾಭಿವೃದ್ಧಿರಸ್ತು” ಇವೇ ಮೊದಲಾದ ವಾಕ್ಯಗಳಿಂದ ತಾವು ಮಹಾತ್ಮರೆಂದು ಧನಿಕರನ್ನು ಮೋಹಪಡಿಸಿ ಮೋಸಗೊಳಿಸುವರು. ಇಷ್ಟೇ ಅಲ್ಲ. ಈ ಜೋಯಿಸರು ಜನಗಳ ಜಾತಕಗಳನ್ನು ಸರಿಯಾಗಲಿ ತಪ್ಪಾಗಲಿ ನಿರ್ಭಯವಾಗಿ ಬರೆಯುವರು. ಸರಿಯಾದ ಜಾತಕವು ಫಲಿಸಿದರೆ “ಇಗೋ!

ನಾನು ಹೇಳಿದುದು ಅನುಭವಕ್ಕೆ ಬಂದಿತೋ ಇಲ್ಲವೋ? ಖಂಡಿತವಾಗಿ ಶುಕ್ರದಶೆಯಲ್ಲಿ ನಿನಗೆ ಬಹಳ ಒಳ್ಳೆಯುದಯ್ಯಾ ಎಂದು ನಾನು ಹೇಳಿರಲಿಲ್ಲವೇ ?" ಎಂದು ಸ್ವಸಾಮರ್ಥ್ಯವನ್ನು ಪ್ರಕಟಿಸುವರು. ತಪ್ಪಾದ ಜಾತಕವು ಫಲಿಸದಿದ್ದರೆ "ನೀವು ಸರಿಯಾದ ಹೊತ್ತನ್ನು ತಿಳಿಸಲಿಲ್ಲ; ಆದುದರಿಂದ ಜಾತಕವು ಕೊಂಚ ಭೇದಿಸಿರಬಹುದು" ಎನ್ನುವರು. ಹೀಗೆ ಧನಿಕರ ಧನವನ್ನು ಪ್ರತ್ಯಕ್ಷವಾಗಿ ಕದಿಯುವರು. ಮನುಷ್ಯನಿಗೆ ಪ್ರಾಕ್ಕೃತಕರ್ಮಪರಿಪಾಕದಿಂದ ಈ ಲೋಕದಲ್ಲಿ ಸುಖವೋ ದುಃಖವೋ ಪ್ರಾಪ್ತವಾದರೆ "ನಿಮಗೆ ಹೀಗೆ ಆಗುತ್ತದೆ ಎಂದು ನಾನು ಹೇಳಿದ್ದೆನಲ್ಲಾ" ಎಂದು ಜ್ಯೋತಿಷ್ಕರು ಸುಳ್ಳು ಹೇಳುವರು. ಇಷ್ಟಪ್ರಾಪ್ತಿಯಲ್ಲಿಯೂ ಅನಿಷ್ಟನಿವಾರಣೆಯಲ್ಲಿಯೂ ನಿರತರಾದ ಜನಗಳನ್ನು "ನಿಮ್ಮ ಜಾತಕದಲ್ಲಿ ಲಗ್ನಾತ್ತೃತೀಯಕ್ಕೆ ರವಿಯು ಬಂದರೆ ಬಹಳ ಒಳ್ಳೆಯದು; ಈಗ ಲಗ್ನದಲ್ಲಿ ಇದಾನೆ. ಆದುದರಿಂದ ಸ್ವಲ್ಪಯೋಚನೆಗೆ ಕಾರಣವಾಗಿದೆ" ಎಂದು ಬಾರಿಬಾರಿಗೂ ಮೀನಮೇಷಗಳನ್ನು ಎಣಿಸುತ್ತಾ ನುಡಿದು ಜನಗಳಿಗೆ ಕಳವಳವನ್ನುಂಟುಮಾಡುತ್ತಾರೆ. ಯಥಾರ್ಥವಾಗಿ ಹೇಳುವ ಜೋಯಿಸನಿದ್ದರೂ ಗ್ರಹಗತಿಗಳನ್ನು ಕುರಿತು ಅವನನ್ನು ಪ್ರಶ್ನೆಮಾಡುವುದು ವ್ಯರ್ಥವು. ಕಾರಣವೇನೆಂದರೆ, ಸುಖವಾಗಲಿ ದುಃಖವಾಗಲಿ ಕಾಲಕರ್ಮಸಂಯೋಗವಾದಲ್ಲಿ ಲಭಿಸುವುದು. ಆ ಫಲಗಳನ್ನು ಜೋಯಿಸರಿಂದ ಮುಂಚಿತವಾಗಿ ತಿಳಿದುಕೊಂಡರೆ ನಮಗಾಗುವ ಪ್ರಯೋಜನವೇನು?

ವಿಶ್ವಾವಸು—ಐಹಿಕಾಮುಷ್ಮಿಕ ಕರ್ಮಗಳಲ್ಲಿ ಉಪ ಯುಕ್ತರಾದ ಜ್ಯೋತಿಶ್ಶಾಸ್ತ್ರಜ್ಞರು ದೂಷಣೀಯರಲ್ಲ. ಚೆನ್ನಾಗಿ ಕೇಳು. ಯಾವದೇಶದಲ್ಲಿ ಜ್ಯೋತಿಷ್ಕರಿಲ್ಲವೋ ಆ ದೇಶದಲ್ಲಿ ದೈವಪೈತೃಕಕರ್ಮಗಳು ಸಿದ್ಧಿಸುವದಿಲ್ಲ. ನವಗ್ರಹಗಳೂ ತಿಥಿಗಳೂ ವಾರಗಳೂ ನಕ್ಷತ್ರಗಳೂ ಇರುವುದೇ ಇಲ್ಲ. ಎಂದರೆ ಒಂದು ದೇಶದಲ್ಲಿ ಒಬ್ಬ ಜ್ಯೋತಿಶ್ಶಾಸ್ತ್ರಜ್ಞನಿದ್ದರೆ ಆತನು ಒಂದು ಪಂಚಾಙ್ಗವನ್ನುಬರೆದು ಅದರಲ್ಲಿ ಜನಗಳಿಗೆ ಸುಲಭವಾಗಿ ತಿಳಿಯುವಂತೆ ತಿಥಿವಾರನಕ್ಷತ್ರಯೋಗಕರಣ ಎಂಬಿವುಗಳನ್ನು ಪ್ರಕಟಿಸಿ ಶುಭಾಶುಭದಿನಗಳನ್ನು ತಿಳಿಸುವನು. ಇದೂ ಅಲ್ಲದೆ ಪ್ರತಿ ವತ್ಸರದಲ್ಲಿಯೂ ಸಂಭವಿಸುವ ದರ್ಶಪೂರ್ಣಮಾಸಾದಿಗಳನ್ನೂ ಸೂರ್ಯಚಂದ್ರಗ್ರಹಣಗಳನ್ನೂ ವಿವಾಹೋಪನಯನಾದಿಶುಭಕರ್ಮಗಳಿಗೆ ಯೋಗ್ಯವಾದ ಮುಹೂರ್ತಗಳನ್ನೂ ಜ್ಯೋತಿಷ್ಕನು ತಿಳಿಸುವದರಿಂದ ಜನರು ತಮ್ಮತಮ್ಮ ಕೆಲಸಗಳನ್ನು ಯಥಾಕಾಲದಲ್ಲಿ ಮಾಡಲು ಶಕ್ತರಾಗುವರು. ಆದುದರಿಂದ ಯಾವ ದೇಶದಲ್ಲಿ ಜ್ಯೋತಿಷ್ಕನೇ ಇರುವದಿಲ್ಲವೋ ಆ ದೇಶನಿವಾಸಿಗಳು ತಿಥಿವಾರಾದಿಗಳನ್ನೂ ಗ್ರಹಗತಿಗಳನ್ನೂ ಅರಿಯದೆ ಇರುವದರಿಂದ "ನಮ್ಮ ದೇಶದಲ್ಲಿ ತಿಥಿಯೂ ಇಲ್ಲ. ವಾರವೂ ಇಲ್ಲ. ಗ್ರಹಗಳೂ ಇಲ್ಲ. ಗ್ರಹಣಗಳೂ ಇಲ್ಲ." ಎಂದು ಹೇಳುವಷ್ಟು ಪಾಮರರಾಗುವರು. ಜ್ಯೋತಿಷ್ಕರು ಯಥಾರ್ಥವನ್ನು ನುಡಿದರೂ ಅವರ ಮಾತುಗಳಿಗೆ ಕಿವಿಗೊಡಬಾರದೆಂಬುವುದು ಬುದ್ಧಿಹೀನರ ಅಭಿಪ್ರಾಯವು. ಏತಕ್ಕೆಂದರೆ, ಸೂರ್ಯನ ಅಥವಾ ಚಂದ್ರನ ಗ್ರಹಣಕಾಲವು ಮುಂಚಿತವಾಗಿ

ಜ್ಯೋತಿಶ್ಶಾಸ್ತ್ರಜ್ಞರು ತಿಳಿಸಿದರೆ ಜನಗಳು ಗಂಗಾದಿಪುಣ್ಯ ತೀರ್ಥಗಳಲ್ಲಿ ಸ್ನಾನಮಾಡಿ ನಿಷ್ಕಲ್ಮಷರೂ ತಾಪತ್ರಯರ ಹಿತರೂ ಆಗಬಹುದು. ಇಷ್ಟೇ ಅಲ್ಲ. ಇಷ್ಟವಾದುದು ಪ್ರಾಪ್ತವಾಗುವುದೆಂದು ನಮಗೆ ಮುಂಚಿತವಾಗಿ ತಿಳಿದರೆ ಧೈರ್ಯವೂ ತೃಪ್ತಿಯೂ ಉಂಟಾಗುವುವು. ಇಂತಹ ಕಾಲದ ಲ್ಲಿ ಕಷ್ಟವು ಸಂಭವಿಸುವದೆಂದು ಮುಂಚಿತವಾಗಿ ತಿಳಿದರೆ ಮುಂದೆ ಬರತಕ್ಕ ಕಷ್ಟವನ್ನು ಜಪಾದಿಶಾಂತಿಗಳಿಂದ ಪರಿ ಹರಿಸಿಕೊಳ್ಳಬಹುದು. ಜ್ಯೋತಿಷ್ಕರ ವಚನಗಳಲ್ಲಿ ನಚ್ಚಿಕೆ ಯನ್ನಿಡದೇ ಇರುವುದು ಅವಿವೇಕಿಗಳ ಮತವು. ಚಂದ್ರನ ವೃದ್ಧಿಕ್ಷಯಗಳೂ ಸೂರ್ಯಚಂದ್ರಗ್ರಹಣಗಳೂ ಶುಕ್ರಾದಿ ಗ್ರಹಗಳ ಉದಯಾಸ್ತಮಯಗಳೂ ಇವೇ ಮೊದಲಾದವು ಜ್ಯೋತಿಷ್ಕರಿಂದ ನಿಶ್ಚಿತವಾಗಿ ಸರ್ವಾನುಭವವಿಷಯಗಳಾ ಗಿವೆ. ಆದುದರಿಂದ ಜ್ಯೋತಿಶ್ಶಾಸ್ತ್ರಜ್ಞರು ಹೇಳುವ ಇತರ ವಿಷಯಗಳನ್ನೂ ಪ್ರಾಜ್ಞರು ಕುಂಭೀಪ್ರುಲಾಕನ್ಯಾಯಾ ನುಸಾರವಾಗಿ ನಂಬತಕ್ಕುದು. ಬುದ್ಧಿಶಾಲಿಗಳು ಜ್ಯೋತಿಷ್ಕ ನಿಲ್ಲದ ಗ್ರಾಮದಲ್ಲಿ ವಾಸಮಾಡಬಾರದು. ಪಂಡಿತರಿಲ್ಲದ ರಾಜಸಭೆಯನ್ನು ಪ್ರವೇಶಿಸಬಾರದು. ವೇದಾಕ್ಷರವನ್ನರಿ ಯದ ಬ್ರಾಹ್ಮಣನ ಮುಖವನ್ನೇ ನೋಡಬಾರದು. ಅನಾ ಯಕವಾದ ರಾಜ್ಯದಲ್ಲಿರಬಾರದು. ದುಶ್ಶೀಲಳಾದ ಹೆಂಡತಿ ಯನ್ನು ಬಿಡತಕ್ಕುದು. ಹರಿಕಥಾಶೂನ್ಯವಾದ ಕಾವ್ಯವನ್ನು ಓದಬಾರದು. ಕೋರಿದ ಸಂಗತಿಗಳನ್ನು ತಿಳಿಸದ ಗುರುವ ನ್ನು ಸನ್ಮಾನಿಸಬಾರದು.

ಕೃಶಾನು.—ನಗುಮೊಗದೊಡನೆ ಹಾಗೆಯೇ ಆಗಲಿ ಎಂದು ಹೇಳಿ ಮುಂದೆ ನೋಡಿ ಹೇಳಲಾರಂಭಿಸಿದನು.

ರೋಗನಿವಾರಣೆಯಂ ಮಾಡದ ಔಷಧಗಳಿಂದಲೂ ಎಳ್ಳಷ್ಟು ಗುಣವನ್ನೂ ತೋರಿಸದ ಕಷಾಯಗಳಿಂದಲೂ ಅಸಹ್ಯವಾದ ಲೇಹ್ಯಗಳಿಂದಲೂ, ಕೆಲಸಕ್ಕೆ ಬಾರದ ತೈಲಗಳಿಂದಲೂ ಸಾವಿರಾರು ರೋಗಿಗಳನ್ನು ವಂಚಿಸಿ ಸಂಪಾದಿಸಿದ ಹಣ ದಿಂದ ಹಾಳು ಹೊಟ್ಟೆಗಳೆಂಬ ಕಡಾಯಿಗಳನ್ನು ತುಂಬಿ ಗರ್ವಿತರಾದ ಈ ವೈದ್ಯರಿಗೆ ವಾತಪೈತ್ಯಶ್ಲೇಷ್ಮಾತ್ಮಕವಾದ ನಾಡಿಗಳನ್ನು ಪರೀಕ್ಷಿಸುವ ರೀತಿಯೇ ತಿಳಿಯದು. ಇವರು ವೈದ್ಯಗ್ರಂಥಗಳ ಹುಟ್ಟನ್ನೇ ಅರಿಯರು. ಜ್ವರಮೋಹಾದಿ ರೋಗಗಳ ತತ್ವವೇ ತಿಳಿಯದು. ಇವರಿಗೆ ಔಷಧಗಳ ಶೈತ್ಯ ಪೈತ್ಯಾದಿಗುಣಗಳ ಪರಿಚಯವೇ ಇಲ್ಲ. ಇಂತಹ ನಿರಕ್ಷರ ಕುಕ್ಷಿಗಳಾದ ನರಾಧಮರು ವೈದ್ಯರೆಂಬ ಹೆಸರನ್ನಿಟ್ಟುಕೊಂ ಡು ಜನಗಳಿಗೆ ಭ್ರಾಂತಿಯನ್ನುಂಟುಮಾಡಿ ಅವರ ಹಣವ ನ್ನೂ ಕೆಲವು ವೇಳೆಗಳಲ್ಲಿ ಯಮಕಿಂಕರರಂತೆ ಪ್ರಾಣಗಳ ನ್ನೂ ಅಪಹರಿಸುವರು. ಕಷಾಯಗಳಿಂದಲೂ ಪಥ್ಯದಿಂ ದಲೂ, ಉಪವಾಸಗಳಿಂದಲೂ ಜನಗಳಿಗೆ ರೋಗನಿವಾರ ಣೆಯಾದರೆ ತಮ್ಮ ಔಷಧಪ್ರಭಾವದಿಂದಲೇ ಆರೋಗ್ಯ ವುಂಟಾಯಿತೆಂದು ದಂಭಕೊಚ್ಚಿಕೊಂಡು ಜನರ ವಿತ್ತವನ್ನ ಪಹರಿಸುವರು. ಇಂತಹ ಆತ್ಮಘೋಷಮುಖರರಾದ ವೈದ್ಯ ರನ್ನೆಂದಿಗೂ ನಂಬಬಾರದು.

ವಿಶ್ವಾವಸು.—ಸಖನೆ ! ಲೋಕೋಪಕಾರಿಗಳಾದ ವೈದ್ಯರನ್ನು ಸುಮ್ಮನೆ ದೂಷಿಸಬೇಡ. ನೋಡ, ನೋಡು! ತಲೆಯು ದುಸ್ಸಹವಾದ ರೋಗಗಳಿಂದ ಆಕ್ರಮಿಸಲ್ಪಟ್ಟು, ಧ್ವನಿಯು ಕುಗ್ಗಿ, ಜ್ವರಾಗ್ನಿಯಿಂದ ಮೈಕೈಗಳು ಸುಡು

ವಷ್ಟು ಬೆಚ್ಚಗಿರಲು, ಇಂದ್ರಿಯ ವ್ಯಾಪಾರಗಳು ನಡೆಯು ದಿರಲು ನೆಂಟರೆಲ್ಲರೂ ಅಯ್ಯೋ! ಅಪ್ಪಾ! ಎಂದು ಪ್ರಲಾಪಿ ಸುತ್ತಿರಲು ಇವರೆಲ್ಲರಿಗೂ ಅಭಯುವನ್ನು ಕೊಟ್ಟು ರೋಗಿಯ ಬಾಧೆಯುನ್ನು ಶಮನಮಾಡುವ ವೈದ್ಯನಿಗಿಂತಲೂ ಪುಣ್ಯಾತ್ಮನೂ ಸಮರ್ಥನೂ ಯಾರು? ಈ ವೈದ್ಯರು ವೈದ್ಯ ಗ್ರಂಥಗಳನ್ನು ಓದದಿದ್ದರೂ ಚಿಂತೆಯಿಲ್ಲ. ಒಂದು ಗ್ರಾಮದಲ್ಲಿ 'ಪಂಡಿತರು' ಎಂದು ಪ್ರಸಿದ್ಧನಾದ ಒಬ್ಬ ವೈದ್ಯನಿದ್ದರೆ ರೋಗಗಳು ಸಂಭವಿಸಿದಾಗ ಜನಗಳು ಆತನನ್ನು ಕರೆದು ಔಷಧವನ್ನು ತೆಗೆದುಕೊಳ್ಳುವರು. ಹೀಗೆ ಸರ್ವರಿಗೂ ಆರೋಗ್ಯಭಾಗ್ಯವನ್ನು ಉಂಟುಮಾಡುವ ವೈದ್ಯರನ್ನು ನಿಂದಿಸಬಹುದೆ?

ಎಲೈ ಮಂದಮತಿಯಾದ ಕೃಶಾನುವೇ! ಹೀಗೆ ವೈದ್ಯರನ್ನು ದೂಷಿಸುವುದು ನಿನ್ನ ತಪ್ಪಲ್ಲ. ಲೋಕವೇ ಹೀಗೆ. ಯಜ್ಞವು ಮುಗಿದಮೇಲೆ ಋತ್ವಿಕ್ಕುಗಳಿಂದೇನು ಪ್ರಯೋಜನ? ನದಿಯನ್ನು ದಾಟಿದಮೇಲೆ ನಾವಿಕನಿಂದೇನು ಉಪಯೋಗ? ಯುದ್ಧದಲ್ಲಿ ಜಯಿಸಿದ ಮೇಲೆ ಸೈನಿಕರಿಂದ ಕಾರ್ಯವೇನು? ಊರಿಗೆ ಬಂದು ಬಿದ್ದಮೇಲೆ ಮೂಟೆಹೊರುವವನಿಂದ ಪ್ರಯೋಜನವೇನು? ಮುದಿಸೂಳೆಯರಿಂದ ಉಪಯೋಗವೇನು? ರೋಗವೆಲ್ಲಾ ನಿಶ್ಶೇಷವಾಗಿ ಹೋದ ಮೇಲೆ ವೈದ್ಯನಿಂದಾಗತಕ್ಕುದೇನು? ಎಂದು ಲೋಕದಲ್ಲಿ ಕೃತಘ್ನರು ನುಡಿವುದು ಸಹಜವಾಗಿಯೇ ಇದೆ.

ಕೃಶಾನು—ವಿಮಾನವನ್ನು ಮುಂದೆ ಹೊರಡಿಸಿ ಸುತ್ತಲೂ ನೋಡಿ ನುಡಿದನದೆಂತೆಂದರೆ:—ಎಲೈ ಮಿತ್ರನೆ! ಇದೇ

ನು ಆಶ್ಚರ್ಯ! ಇಲ್ಲಿರುವ ಕವಿಗಳ ನಡತೆಯು ಶಾಸ್ತ್ರವಿರುದ್ಧವಾಗಿದೆ. ಶ್ರೀನಾರಾಯಣನನ್ನು ವರ್ಣಿಸಲು ಯೋಗ್ಯವಾದ ಕವಿತಾಶಕ್ತಿಯು ಇವರಲ್ಲಿದ್ದರೂ ಭಗವದನುಗ್ರಹದಿಂದ ಬಂದ ಆ ದಿವ್ಯವಾಣೀವಿಲಾಸವನ್ನು ದುರುಳರೂ, ಪತಿತರೂ, ಲೋಭಿಗಳೂ, ಮತ್ತರೂ ಆದ ರಾಜಾಧಮರವಶದಲ್ಲಿಡುವರು. ವಿಮಲಮತಿಗಳಾದ ಜನರು ದೇವತಾಭಿಷೇಕಾರ್ಥವಾಗಿ ಇನ್ನೂರು ಮುನ್ನೂರು ಗಾವುದಗಳಿಂದ ತಂದ ಗಂಗಾಜಲವನ್ನು ಹಣ್ಣುಹಂಪಲುಗಳನ್ನು ಬೆಳೆಯಿಸುವ ಪಾದಿಯಲ್ಲಿ ಸುರಿಯುವರೆ? ವಿನಯಹೀನನಾದ ರಾಜನೂ ಸ್ವಾಮಿಯ ಕಿರೀಟದಲ್ಲಿಡಲು ಉಚಿತವಾದ ದಿವ್ಯಮಣಿಮೌಕ್ತಿಕಗಳನ್ನು ತಾನು ಸಾಕಿದ ನಾಯಿಯ ತಲೆಯಲ್ಲಿಡುವಂತೆ ಬುದ್ಧಿಹೀನರಾದ ಈ ಕವಿಗಳು ಸ್ತುತಿಸುವವರ ಭವರೋಗವನ್ನು ನಾಶಮಾಡುವ ಹರಿಯು ಎಲ್ಲೆಲ್ಲಿಯೂ ಇದ್ದಾಗ್ಯೂ ನೀಚರಾದ ಕಾಮುಪರವಶರಾದ ತರುಣಿಯರ ಕ್ಷಣಭಂಗುರವಾದ ಲಾವಣ್ಯವನ್ನು ವರ್ಣಿಸುವರಲ್ಲಾ! ಇದಕ್ಕಿಂತಲೂ ನೀಚವಾದ ಕೃತ್ಯವುಂಟೆ?

ವಿಶ್ವಾವಸು—ಅಜ್ಞಾನಾಂಧಕಾರವನ್ನು ನಾಶಮಾಡುವ ಕವೀಶ್ವರರನ್ನು ದೂಷಿಸಬೇಡ. ರಾಜವರ್ಣನೆಯಲ್ಲಿ ಉಪಯೋಗಿಸಲ್ಪಡುವ ಕವಿತಾವಿಲಾಸವು ನಿಷ್ಫಲವಾದರೂ ದೇವತಾಸಾರ್ವಭೌಮನಾದ ಮಹಾವಿಷ್ಣುವಿನ ಗುಣವರ್ಣನೆಯಲ್ಲಿ ಪ್ರಯೋಗಿಸಲ್ಪಡುವ ವಾಗ್ವೈಖರಿಯು ಎಂತು ನಿಷ್ಫಲವಾದೀತು? ಅಶ್ರೋತ್ರಿಯರಿಗೆ ಕೊಟ್ಟ ಹಣವು ವ್ಯರ್ಥವಾದರೂ ಸತ್ಪಾತ್ರದಲ್ಲಿ ಕೊಡಲ್ಪಟ್ಟ ದ್ರವ್ಯವು ಫಲ

ವನ್ನೆಂತು ಕೊಡಲಾರದು? ಭಗವತ್ಕಥಾಸಂಕೀರ್ತನೆಯಿಂದ ಕವಿಗಳು ಶ್ರೇಯಸ್ಸನ್ನು ಪಡೆಯುವರು. ಇಂತಹ ಸತ್ಕಾವ್ಯಗಳಲ್ಲಿ ಶೃಂಗಾರವೀರಾದಿರಸಗಳನ್ನು ಅಲ್ಲಲ್ಲಿ ವರ್ಣಿಸಿದರೂ ದೋಷವೇನು? ವಾಲ್ಮೀಕಿವ್ಯಾಸ ಕಾಳಿದಾಸಾದಿಮಹಾಕವಿಗಳು ಬರೆದ ರಾಮಾಯಣಮಹಾಭಾರತಾದಿಮಹಾಕಾವ್ಯಗಳಲ್ಲಿ ಶೃಂಗಾರವೀರಾದಿರಸಗಳು ವರ್ಣಿತವಾಗಿಲ್ಲವೆ?

ಕೃಶಾನು—ಮನುಷ್ಯರನ್ನು ಸ್ತೋತ್ರಮಾಡುವ ಕವಿಗಳು ಎಂದಿಗೂ ಮಾನನೀಯರಾಗಲಾರರು.

ವಿಶ್ವಾವಸು—ಅರ್ಥಚಾಪಲ್ಯವುಳ್ಳ ಸಕಲ ಜನಗಳಲ್ಲಿಯೂ ಕಾಣುವ ಈ ದೋಷವನ್ನು ಅವಿವೇಕಿಗಳು ಕವಿಗಳಲ್ಲಿ ಮಾತ್ರ ಆರೋಪಿಸುವರು. ಕೆಲವು ಕವೀಶ್ವರರು ಅರಸರನ್ನು ಕಿವಿಗೆ ಇಂಪಾಗಿಯೂ ರಸಭರಿತವಾಗಿಯೂ ಇರುವ ಪದ್ಯಗಳಿಂದ ಸ್ತೋತ್ರಮಾಡುತ್ತಾರೆ. ಮತ್ತೆ ಕೆಲವರು ನೀರಸವಾಗಿಯೂ ಅಶ್ರಾವ್ಯವಾಗಿಯೂ ಇರುವ ಪದ್ಯಗಳಿಂದ ಹೊಗಳುವರು. ರಸಭರಿತವಾಗಿ ಕವನಮಾಡುವ ಶಕ್ತಿಗೂ ಹಾಗಲ್ಲದೆ ನಿಸ್ಸಾರವಾದ ಕವಿತ್ವವನ್ನು ಮಾಡುವುದಕ್ಕೂ ಇರುವ ಭೇದವು ಕವಿಜನಗಳಲ್ಲಿ ಮಾತ್ರ ಕಾಣುವುದು. ನರಸ್ತುತಿದೋಷವಾದರೋ ಧನಚಪಲರಾದ ಸರ್ವರಲ್ಲಿಯೂ ಕಾಣುವುದು; ಆದುದರಿಂದ ಕೇವಲವಾಗಿ ಕವಿಗಳನ್ನೇ ನಿಂದಿಸುವುದೇಕೆ? ವಾಲ್ಮೀಕಿವ್ಯಾಸಪರಾಶರಾದಿಪುರಾಣಕವಿಗಳು ತಮ್ಮ ಉದ್ಗ್ರಂಥಗಳಿಂದ ಲೋಕಕ್ಕೆ ಮಹೋಪಕಾರವನ್ನು ಮಾಡಿದುದರಿಂದ ಈಗಲೂ ಪೂಜನೀಯರಾಗಿಲ್ಲವೆ? ಹಾಗೆಯೇ ಗುಣಜ್ಞರು ಆಧುನಿಕಕವಿಗೋಷ್ಠಿಯನ್ನೂ



ಸಮ್ಮಾನಿಸತಕ್ಕದು. ಶಿಶುಪಾಲವಧೆಯನ್ನು ಬರೆದ್ಧ ಮಾಘ
ನೂ, ನಾಟಕವನ್ನು ಬರೆದ ಮುರಾರಿಯೂ, ಕಿರಾತಾರ್ಜು
ನೀಯವನ್ನು ಬರೆದ ಭಾರವಿಯೂ, ನೈಷಧವನ್ನು ಬರೆದ
ಶ್ರೀಹರ್ಷನೂ, ರಘುವಂಶ, ಕುಮಾರಸಂಭವ, ನಳೋದಯ
ಶಾಕುಂತಲಾದಿಮಹಾಗ್ರಂಥಗಳನ್ನು ರಚಿಸಿದ ಕಾಳಿದಾಸ
ನೂ, ಉತ್ತರರಾಮಚರಿತಮಾಲತೀಮಾಧವಾದಿಗ್ರಂಥಗಳನ್ನು
ಬರೆದ ಭವಭೂತಿಯೂ, ರಾಮಾಯಣಚಂಪೂವನ್ನು ಬರೆದ
ಭೋಜರಾಜನೂ, ದಶಕುಮಾರಚರಿತೆಯನ್ನು ಬರೆದ ದಂಡಿ
ಯೂ, ಕಾದಂಬರಿಯನ್ನು ಬರೆದ ಬಾಣನೂ, ವಾಸವದತ್ತಾ
ಎಂಬ ಗ್ರಂಥವನ್ನು ಬರೆದ ಸುಬಂಧುವೂ ಇವರೇ ಮೊದ
ಲಾದ ಅನೇಕಕವಿಗಳು ತಮ್ಮ ಕಾವ್ಯಗಳಿಂದ ಲೋಕವನ್ನು
ಈಗಲೂ ಆಹ್ಲಾದಿಸುತ್ತಿರುವರು. ಐಶ್ವರ್ಯಕ್ಕೆ ಸೌಜನ್ಯವೇ
ಭೂಷಣವು. ಸಾಹಿತ್ಯಕ್ಕೆ ಶಾಸ್ತ್ರವಿಚಕ್ಷಣತ್ವವೇ ಭೂಷಣ,
ಸಾಮರ್ಥ್ಯಕ್ಕೆ ಪರೋಪಕಾರಬುದ್ಧಿಯೇ ಭೂಷಣ. ಸಾ
ಮ್ರಾಜ್ಯಕ್ಕೆ ದಾಕ್ಷಿಣ್ಯವೇ ಭೂಷಣ. ಔದಾರ್ಯಕ್ಕೆ ಪ್ರಿಯವಾ
ದವೇ ಭೂಷಣವೆಂದು ಮಹನೀಯರು ಪೇಳುವರು.

ಕೃಶಾನು.—ವಿಮಾನವನ್ನು ಮುಂದೆ ತಿರುಗಿಸಿ ಹೇಳ
ತೊಡಗಿದನು. ವಿವಾದನಿರತರಾದ ಈ ಮನುಷ್ಯರನ್ನು
ನೋಡು. ವ್ಯರ್ಥವಾಗಿ ತರ್ಕಶಾಸ್ತ್ರವನ್ನು ಓದುವುದರಲ್ಲಿ
ಕಾಲಕ್ಷೇಪವಂ ಮಾಡುವುರು.

ಈ ತಾರ್ಕಿಕರು ಭೋಗಾಪವರ್ಗಪ್ರದವಾದ ಕರ್ಮ
ಬ್ರಹ್ಮವಿಚಾರವನ್ನು ಬಿಟ್ಟು ಕಂಠಶೋಷಣೆಗೆ ಕಾರಣವಾ
ದ ನಿಷ್ಫಲವಾದ ಹರಟೆಗಳಲ್ಲಿ ಕಾಲವಂ ಕಳೆಯುವರು.

"ಪ್ರತ್ಯಕ್ಷ" ಎಂಬುದು ಇವರನ್ನು ಪವಿತ್ರರನ್ನಾಗಿ ಮಾಡುವುದೆ?

"ಪೀಲುಚ್ಛಟಾ" ಎಂಬುದು ಇವರ ಪಾಪಜಾಲವನ್ನು ಹೋಗಲಾಡಿಸುವದೆ?

"ವ್ಯಾಪ್ತಿ" ಎಂಬುದು ಇವರನ್ನು ಸಂರಕ್ಷಿಸುವದೆ?

"ಅನುಮಿತಿ" ಎಂದು ಹೇಳುವದರಿಂದ ಇವರ ಹೊಟ್ಟೆಯು ತುಂಬುವದೆ?

"ಪಕ್ಷತಾ" ಎಂಬ ಪದದಿಂದ ಮೋಕ್ಷವು ಲಭಿಸುವುದೆ?

"ಪರ್ವತೋವಹ್ನಿಮಾನ್" ಎಂಬುದನ್ನು ಕುರಿತು ನಿಷ್ಪ್ರಯೋಜನವಾದ ಹರಟೆಗಳಲ್ಲಿ ಕಾಲವಂ ಕಳೆಯುವವರೇ ಪಂಡಿತರಾದರೆ "ಆಡಿನ ಅಂಡವು ಎಷ್ಟು ಧಪ್ಪ?" "ಕಾಗಿಗೆ ಹಲ್ಲುಗಳೆಷ್ಟು?" ಎಂಬಿವುಗಳನ್ನು ಕುರಿತು ವಾದಿಸುವವರು ಪಂಡಿತರಲ್ಲವೆ? ಅತಿಪ್ರಯಾಸದಿಂದ ಕುತರ್ಕಪ್ರಕರಣಗಳನ್ನು ಓದಿ ಕೆಲವು ಅವಚ್ಛೇದಕಾದಿಶಬ್ದಗಳನ್ನು ನೆನಪಿನಲ್ಲಿಟ್ಟು ಸಭೆಯಲ್ಲಿ ನಾಚಿಕೆಯಿಲ್ಲದೆ ಕರ್ಣಕಠೋರವಾದ ಘಟಪಟ ಶಬ್ದಗಳನ್ನು ಹರಟುವರು. ಪಂಡಿತರು ನಾಚಿಕೆಯಿಂದ ಇವರನ್ನು ನೋಡದೆ ಮರೆಯಾಗುವುರು. ಆದುದರಿಂದ ಈ ಶುಷ್ಕತಾರ್ಕಿಕರಿಗಿಂತಲೂ ಮೂರ್ಖರುಂಟೆ?

ವಿಶ್ವಾವಸು.—ಸಖನೆ! ತರ್ಕಶಾಸ್ತ್ರವನ್ನು ದೂಷಿಸಬೇಡ. ತರ್ಕಶಾಸ್ತ್ರಾಭ್ಯಾಸವು ಬುದ್ಧಿಮಾಂದ್ಯವನ್ನು ಹೋಗಲಾಡಿಸುತ್ತದೆ. ಗೀರ್ವಾಣಭಾಷೆಯಲ್ಲಿ ಮಾತಾಡುವ ಶಕ್ತಿ

ಯನ್ನು ಕೊಡುತ್ತದೆ. ಇತರ ಶಾಸ್ತ್ರಗಳನ್ನು ಓದಲು ಸಾಮರ್ಥ್ಯವನ್ನುಂಟುಮಾಡುತ್ತದೆ. ಆದಕಾರಣ ಈ ಶಾಸ್ತ್ರವನ್ನು ಓದಿ ಕೆಟ್ಟವನು ಯಾರು? ಕಾವ್ಯಾಭ್ಯಾಸದಲ್ಲಿಯೂ, ವ್ಯಾಕರಣಾಧ್ಯಯನದಲ್ಲಿಯೂ ಆಯುಸ್ಸನ್ನು ಕಳೆದವನು ಒಂದು ಸಭೆಯನ್ನು ಪ್ರವೇಶಿಸಿ ಶಾಸ್ತ್ರೀಯಚರ್ಚೆಯನ್ನು ಕುರಿತು ಒಂದು ವಾಕ್ಯವನ್ನಾದರೂ ಹೇಳಲಿಚ್ಛಿಸಿದರೆ ನಾಲಿಗೆಯು ಹಿಂದೆಗೆಯುವದು; ಈ ಅವಸ್ಥೆಯೇಕೆ? ವಾಗ್ವೈಖರಿಯನ್ನುಂಟುಮಾಡುವ ತರ್ಕಶಾಸ್ತ್ರವನ್ನೋದಬಾರದೆ? ಜ್ಞಾನನಿಧಿಗಳಾದ ಅಕ್ಷಪಾದ, ಕಣಭಕ್ಷಕ, ಪಕ್ಷಿಲ, ಉದಯನ, ಗಂಗೇಶ್ವರ, ವರ್ಧಮಾನ, ಶಶಧರ ಇವರೇ ಮೊದಲಾದ ತಾರ್ಕಿಕ ಶಿರೋಮಣಿಗಳು ತಮ್ಮ ಪ್ರೌಢಗ್ರಂಥಜಾತಗಳಿಂದ ಮಾನವರ ಅಜ್ಞಾನವೆಂಬ ಕತ್ತಲೆಯನ್ನು ನಾಶಮಾಡಿ ಜ್ಞಾನದೀಪವನ್ನು ಕೊಟ್ಟಿರುವರು. ಆದಕಾರಣ ಇವರ ಲೋಕೋಪಕಾರವು ಚಿರಸ್ಮರಣೀಯವಾಗಿರುವದು.

ಕೃಶಾನು.—ಮುಂದೆ ಪ್ರಯಾಣಮಾಡಿ ಕೆಲವು ಮೀಮಾಂಸಕರನ್ನು ಕುರಿತು ಹೇಳಲುಪಕ್ರಮಿಸಿದನು. ಈ ಮೀಮಾಂಸಕರು ವೇದಪ್ರಾಮಾಣ್ಯವನ್ನು ಸ್ಥಾಪಿಸುವುದರಲ್ಲಿ ನಿರತರಾದರೂ ಉಪನಿಷತ್ತುಗಳಲ್ಲಿ ಸನ್ನುತನಾದ ಬ್ರಹ್ಮನು ಜಗಜ್ಜನ್ಮಾದಿಗಳಿಗೆ ಕಾರಣವೆಂಬುದನ್ನು ಅಂಗೀಕರಿಸುವದಿಲ್ಲ. ಆದುದರಿಂದ ಮೀಮಾಂಸಾಸೂತ್ರಭಾಷ್ಯಕಾರನಾದ ಶಬರನೇ ಮೊದಲಾದವರನ್ನು ಭಗವದ್ಭಕ್ತರು ಸಮ್ಮಾನಿಸಬಾರದು. ಇವರು ಜಗತ್ತು ಈಶ್ವರಾಧೀನವಲ್ಲವೆಂದು ಹೇಳುವರು. ವಸಿಷ್ಠಾದಿಮಹರ್ಷಿಗಳ ಸತ್ತ್ವಯನ್ನು

ಅಂಗೀಕರಿಸುವದಿಲ್ಲ. ಸೂರ್ಯಚಂದ್ರಾದಿದೇವತೆಗಳ ಚೈತನ್ಯವನ್ನೇ ನಿರಾಕರಿಸುವರು.

ವಿಶ್ವಾವಸು.—ವೇದಾರ್ಥನಿಷ್ಕರ್ಷೆಯಲ್ಲಿ ಬದ್ಧಕಂಕಣರಾದ ಮೀಮಾಂಸಕರನ್ನು ನಿಂದಿಸಬೇಡ. ಪ್ರಮಾಣ, ತಂತ್ರ, ಪ್ರಸಂಗ ಇವೇ ಮೊದಲಾದ ಹನ್ನೆರಡು ಅಧ್ಯಾಯಗಳನ್ನು ಚೆನ್ನಾಗಿ ಪರಿಶೀಲನೆಮಾಡಿ ವೇದಪ್ರಾಮಾಣ್ಯವನ್ನು ಸ್ಥಾಪಿಸುವ ಮೀಮಾಂಸಕರಿಗಿಂತಲೂ ಪಂಡಿತರೂ ಲೋಕೋಪಕಾರಿಗಳೂ ಯಾರು? ತಾರ್ಕಿಕರೇ ಆಗಲಿ ಶಬ್ದಶಾಸ್ತ್ರಜ್ಞರೇ ಆಗಲಿ ವೇದಾಂತಿಗಳೇ ಆಗಲಿ ವಿವಾದರಣದಲ್ಲಿ ಜೈಮಿನೀಯನ್ಯಾಯೋಲ್ಲಂಘನಮಾಡಲು ಉದ್ಯುಕ್ತರಾದರೆ ನಾಲಿಗೆ ಸೋತುಹೋಗುವುದು. ಜಗತ್ತಿಗೆ ಒಡೆಯನಿಲ್ಲವೆಂಬುದೂ, ದೇವತಾಚೈತನ್ಯವನ್ನು ನಿರಾಕರಿಸುವುದೂ ಕರ್ಮಪ್ರಾಧಾನ್ಯವನ್ನು ತೋರಿಸಿ ಸ್ಥಾಪಿಸಲೋಸುಗವೇ. ವೇದಸ್ವರೂಪವನ್ನು ವಿಚಾರಿಸಿ, ಅನೇಕನ್ಯಾಯಗಳಿಂದ ಶಾಸ್ತ್ರಾಂತರಪೂರ್ವಪಕ್ಷಗಳನ್ನು ತಿದ್ದಿದ ಜೈಮಿನಿಯೋಗೀಶ್ವರರಲ್ಲಿ ನಮ್ಮ ಹೃದಯವು ಅನವರತವೂ ನಿಲ್ಲಲಿ.

ಶಬರನು, ಕುಮಾರಿಲನು, ಪ್ರಭಾಕರನು, ಪಾರ್ಥಸಾರಥಿಯು, ಅಪ್ಪಯ್ಯದೀಕ್ಷಿತನು ಇನ್ನೂ ಲೋಕವಿಖ್ಯಾತರಾದ ಪಂಡಿತರನೇಕರು ಮೀಮಾಂಸಾಶಾಸ್ತ್ರದ ಮಾನ್ಯತೆಯನ್ನು ಕಾಪಾಡಿರುವರು.

ಕೃಶಾನು.—ಇರಲಿ, ಎಂದು ಹೇಳಿ ಮುಂದೆ ಹೊರಟು ನಕ್ಕು ನುಡಿದನದೆಂತೆಂದರೆ :—

"ಟಿಡ್ಢಾಣಞ್ದ್ವಯಸಜ್" "ವೃದ್ಧಿರೇಚಿ" "ಅಚೋಂತ್ಯಾದಿಟ" ಇವೇ ಮೊದಲಾದ ಉಚ್ಚರಿಸಲು

ಬಹಳ ಕಠಿನವಾದ ಶಬ್ದಗಳನ್ನು ಪಠಿಸಿ ಈ ವೈಯಾಕರಣರು ಕಾಲವಂ ಕಳೆಯುವರು. ಪಾಣಿನಿಯು ಹೇಳಿದ ಅನೇಕವಿಧವಾದ ಸೂತ್ರಗಳಿಂದ ರಾಮಕೃಷ್ಣಾದಿಶಬ್ದಗಳ ನಿಷ್ಪತ್ತಿಯನ್ನು ತಿಳಿದಿದ್ದರೂ ಈ ವೈಯಾಕರಣರು ಪರಮೇಶ್ವರನ ಗುಣಗಳನ್ನು ವರ್ಣಿಸುವ ಒಂದು ಗದ್ಯವನ್ನಾಗಲಿ ಪದ್ಯವನ್ನಾಗಲಿ ಬರೆಯಲಾರರು. ಇಂತಹ ಪಾಂಡಿತ್ಯವೇಕೆ?

ವಿಶ್ವಾವಸು.—ಮಾನನೀಯರಾದ ವೈಯಾಕರಣರನ್ನು ಅನ್ಯಾಯವಾಗಿ ದೂಷಿಸಬಾರದು. ವೇದಾಂಗವಾಗಿರುವುದರಿಂದ ಪಾಪಜಾಲವನ್ನು ನಿರಾಕರಿಸುವ ವ್ಯಾಕರಣಶಾಸ್ತ್ರವನ್ನು ಓದುವವನು ಪಂಡಿತಶ್ರೇಷ್ಠನೆಂದು ತಿಳಿಯತಕ್ಕದು. ಪತಂಜಲಿಭಾಷ್ಯಪಠನವೂ, ಭಾಗೀರಥೀಸ್ನಾನವೂ, ಹರಿನಾಮಸಂಕೀರ್ತನೆಯೂ ಈ ಮೂರೂ ಹುಟ್ಟಿದಂದಿನಿಂದ ಸಾಯುವವರೆಗೂ ಶುದ್ಧಿಪ್ರದವೆಂದು ಹಿರಿಯರು ಹೇಳುವರು. ಪತಂಜಲಿಭಾಷ್ಯವನ್ನು ಓದದವರು ವಿದ್ವತ್ಸಭೆಯನ್ನು ಪ್ರವೇಶಿಸಲಂಜುವರು. ಧನುರ್ವಿದ್ಯೆಯ ಮಾರ್ಗವನ್ನೇ ಅರಿಯದವನು ಯುದ್ಧಭೂಮಿಯನ್ನು ಅಂಜದೆ ಹೇಗೆ ಹೊಕ್ಕುವನು? ವ್ಯಾಕರಣವೆಂಬ ಔಷಧವನ್ನು ಸ್ವೀಕರಿಸದೆ ಇರುವವರಿಗೆ ವಾಕ್ಪಾಟವವೆಲ್ಲಿಯದು? ಅಥವಾ ಯಾವುದಾದರೂ ಒಂದು ಸಂಸ್ಕೃತಶಬ್ದವನ್ನು 'ಅಡ್ಡೇಟಿನಲ್ಲಿ ಒಂದು ಗುಡ್ಡೇಟು' ಎಂಬುವಂತೆ ನುಡಿದರೆ ಶರೀರವು ನಡುಗಿ ಬೆವರುವುದು.

ಕೃಶಾನು.—ಎಲೈ ಮಿತ್ರನೆ! ಅನೇಕವ್ಯಾಕರಣಗಳಿದ್ದಾಗ್ಯೂ ಪಾಣಿನಿವ್ಯಾಕರಣವೇ ಆದರಿಸಲ್ಪಟ್ಟಿದೆ. ಇದರ ರಹಸ್ಯವೇನು?

ವಿಶ್ವಾವಸು.—ಇತರವ್ಯಾಕರಣಗಳನ್ನು ಅಪೇಕ್ಷಿಸದೆ ಈ ಪಾಣಿನಿವ್ಯಾಕರಣವನ್ನು ಓದಬಹುದು. ಆದುದರಿಂದ ಪಾಣಿನಿವ್ಯಾಕರಣವು ಲೋಕದಲ್ಲಿ ಬಹಳ ಪ್ರಚುರವಾಗಿದೆ. ಪಾಣಿನಿವ್ಯಾಕರಣವನ್ನು ಚೆನ್ನಾಗಿ ತಿಳಿಯದವನು ನಿರ್ಭಯವಾಗಿ ಸಂಸ್ಕೃತದಲ್ಲಿ ಮಾತಾಡಲಾರನು.

ಕೃಶಾನು.—ಗೆಳೆಯನೆ! ಹಣದಾಶೆಯಿಂದ ವೇತನವನ್ನು ತೆಗೆದುಕೊಂಡು ವೇದಗಳನ್ನು ಹೇಳಿಕೊಡುವ ನೀಚರಾದ ಭೃತಕಾಧ್ಯಾಪಕರನ್ನು ನೋಡು. ಇಂತಹ ಮಾನಹೀನರನ್ನು ಪ್ರಾಜ್ಞರು ಸಮ್ಮಾನಿಸಬಹುದೆ?

ವಿಶ್ವಾವಸು.—ಸ್ನೇಹಿತನೆ! ಹೀಗೆ ನುಡಿಯಬೇಡ. ವೇದಾಧ್ಯಯನಸಂಪನ್ನರು ಶಿಷ್ಯರಿಗೆ ವೇದಗಳನ್ನು ಕಷ್ಟಪಟ್ಟು ಹೇಳಿಕೊಡದೆ ಇದ್ದರೆ ಭೂಮಂಡಲದಲ್ಲಿ ವೇದಗಳೇ ಇರುತ್ತಿರಲಿಲ್ಲ. ವೇದವಿಹಿತವಾದ ಯಜ್ಞಾನುಷ್ಠಾನವಾರ್ತೆಯೇ ಇರುತ್ತಿರಲಿಲ್ಲ.

ಕೃಶಾನು—ಎಲೈ ಮಿತ್ರನೆ! ವೇದಗಳಿಲ್ಲದಿದ್ದರೆ ಯಜ್ಞಗಳು ನಡೆಯುವದಿಲ್ಲವೆ? ಇದೇನು! ಹೀಗೆ ವಿರುದ್ಧವಾಗ ಮಾತಾಡುತ್ತೀಯೆ?

ವಿಶ್ವಾವಸು— ನಾನು ಹೇಳಿದುದು ಎಂದಿಗೂ ವಿರುದ್ಧವಲ್ಲ. ಯಜ್ಞವನ್ನು ಮಾಡುವವನು ವೇದಾಧ್ಯಯನ ವಿಹೀನನಾದರೆ ಯಜ್ಞವನ್ನು ಮಾಡಿ ಪ್ರಯೋಜನವೇನು? ಅಂತಹ

ಕರ್ಮಕ್ಕೆ ಯಜ್ಞವೆಂಬ ಹೆಸರು ಸಲ್ಲಲಾರದು. ಆದುದರಿಂದ ವೇದಕ್ಕೆ ಅಪಾಯವುಂಟಾದರೆ ಯಜ್ಞಾನುಷ್ಠಾನಕ್ಕೆ ಅವಕಾಶವೆಲ್ಲಿಯದು ?

ಕೃಶಾನು—ಸುತ್ತಲೂ ನೋಡಿ ನಸುನಕ್ಕು ನುಡಿದನು. ಇಹಪರಸೌಖ್ಯಗಳೆರಡನ್ನೂ ಲಕ್ಷಿಸದೆ ರಾಜರನ್ನು ಸೇವಿಸುವ ಈ ಜನರನ್ನು ನೋಡು.

ಸಂಧ್ಯಾನುಷ್ಠಾನವನ್ನು ಸಂಪೂರ್ಣವಾಗಿ ಮಾಡದೆ ಇರುವದರಿಂದಲೂ, ದೇವತಾರ್ಚನೆಯನ್ನು ಸಾಂಗವಾಗಿ ನೆರವೇರಿಸದೆ ಇರುವದರಿಂದಲೂ, ಯಥಾಕಾಲದಲ್ಲಿ ಔಪಾಸನಾದಿಕರ್ಮಗಳನ್ನು ಮಾಡದೆ ಇರುವದರಿಂದಲೂ, ವೇದಾಧ್ಯಯನವನ್ನು ಬಿಟ್ಟಿರುವದರಿಂದಲೂ ಆಮುಷ್ಮಿಕಸೌಖ್ಯವು ಇವರಿಗೆ ಲಭಿಸಲಾರದು. ಯಥಾಕಾಲದಲ್ಲಿ ನಿದ್ರಾಹಾರಗಳು ಇವರಿಗೆ ಇಲ್ಲದಿರುವದರಿಂದ ಐಹಿಕಸೌಖ್ಯವೂ ಇವರಿಗೆ ಅತಿದೂರವರ್ತಿಯಾಗುವುದು. ಇವರು ಬದುಕಿದ್ದರೂ ಪ್ರಯೋಜನವೇನು ?

ವಿಶ್ವಾವಸು—ಅನೇಕಜನರನ್ನು ಪೋಷಿಸುವ ಇಂತಹ ಪುಣ್ಯಪುರುಷರನ್ನು ನೀನು ದೂಷಿಸಬೇಡ. ದುಷ್ಕರ್ಮವರ್ಧಕವಾದ ಕಲಿಯುಗದಲ್ಲಿ ಸ್ವಧರ್ಮವನ್ನು ಕಾಪಾಡಿಕೊಂಡು ಅನೇಕರನ್ನು ಪೋಷಿಸಬೇಕೆಂಬ ಸಂಕಲ್ಪದಿಂದ ಆತ್ಮಸೌಖ್ಯವನ್ನೂ ಬಿಟ್ಟು ಹಗಲಿರುಳೂ ರಾಜಸೇವೆಯಲ್ಲಿ ನಿರತರಾದ ಇವರಲ್ಲಿ ಜನಗಳು ಕೃತಜ್ಞತೆಯನ್ನು ತೋರಿಸತಕ್ಕದು.

ಗಂಗಾಪ್ರವಾಹದಿಂದ ನನೆದ ಪಾದಕಮಲಗಳಿಂದೊಪ್ಪುತ್ತಿರುವವನಾಗಿಯೂ, ಶ್ರೀರಂಗಜಂಬುಕೇಶ್ವರಾದಿ

ಪುಣ್ಯಕ್ಷೇತ್ರಗಳಲ್ಲಿ ಅನ್ಯಾದೃಶವಾದ ಲಾವಣ್ಯದಿಂದೊಪ್ಪುತ್ತಿರುವವನಾಗಿಯೂ, ಪ್ರಪಂಚವನ್ನೆಲ್ಲಾ ಸ್ವಭಾವದಿಂದಲೆ ವಿಶದವಾಗಿ ನೋಡುವವನಾಗಿಯೂ ಭಕ್ತಪರಾಧೀನನಾಗಿಯೂ ಇರುವ ಹರಿಹರಾದಿನಾಮಗಳಿಂದ ಪ್ರಸಿದ್ಧನಾದ ಭಗವಂತನನ್ನು ಧ್ಯಾನಿಸೋಣ.

ಎಲೈ ಸಖನೆ! ಮೂರು ಲೋಕಗಳಲ್ಲಿಯೂ ನರರೇ ಆಗಲಿ ಸುರರೇ ಆಗಲಿ ಪಶುಗಳೇ ಆಗಲಿ ಪಕ್ಷಿಗಳೇ ಆಗಲಿ ಕೇವಲದೋಷಯುಕ್ತರೆಂದು ಹೇಳಲಾಗದು. ಅಲ್ಲಲ್ಲಿ ಗುಣಶಾಲಿಗಳೂ ಕಾಣುವರು.

ಕೃಶಾನು—ಮಿತ್ರನೆ! ನೀನು ಹೇಳಿದುದು ಸತ್ಯವು. ನನ್ನನ್ನು ಕೇವಲದೋಷೈಕಗ್ರಾಹಿಯೆಂದು ನಿಂದಿಸಬೇಡ. ನಾನು ದೋಷಾನ್ವೇಷಣಪರನಾಗಿ ನಿನ್ನೊಡನೆ ವಾದಿಸುದುದು ಲೋಕತ್ರಯದಲ್ಲಿಯೂ ಕಾಣುವ ಗುಣಸಮೃದ್ಧಿಯನ್ನು ದೃಢೀಕರಿಸಲೋಸುಗವೇ.

ಈ ಪ್ರಕಾರವಾಗಿ ಸಕಲಜನಸ್ವಭಾವಗಳನ್ನು ಕುರಿತು ವಾದಿಸಿ, ಹರಿಹರರ ಪುಣ್ಯಕ್ಷೇತ್ರಗಳನ್ನು ಸೇವಿಸಿ ಕೃತಾರ್ಥರಾಗಿ, ಮಾರ್ಗದಲ್ಲೆಲ್ಲಾ ಅಚಂಚಲವಾದ ಸೌಹಾರ್ದವುಳ್ಳವರಾಗಿ ಆನಂದಭರಿತರಾಗಿ ಕೃಶಾನುವು ವಿಶ್ವಾವಸುವೆಂಬಿಬ್ಬರು ಗಂಧರ್ವಮುಖ್ಯರು ತಮ್ಮತಮ್ಮ ಮನೆಗಳಿಗೆ ಹೊರಟುಹೋದರು. ಭೂಮಂಡಲದಲ್ಲಿ ಎಲ್ಲೆಲ್ಲಿಯೂ ಹರಿಹರರೆಂಬೆರಡು ಪುಣ್ಯನಾಮಗಳು ಪ್ರಚುರವಾಗಿರಲಿ. ದೇವಾಲಯಗಳಲ್ಲಿ ಅಭಿಷೇಕ, ಸಹಸ್ರನಾಮಾರ್ಚನೆ ಮೊದಲಾದ ಉತ್ಸವಗಳು ಅನವರತವೂ ಸಂಭ್ರಮದೊಡನೆ ನಡೆಯುತ್ತಿರಲಿ.

ವೇದವೇದಾಂಗಪಾರಂಗರಾಗಿಯೂ, ಸದಾಚಾರಪರರಾಗಿಯೂ ಇರುವ ದ್ವಿಜೋತ್ತಮರಿಗೆ ನಿರಪಾಯವಾಗಿಯೂ, ಅಪರಿಮಿತವಾಗಿಯೂ ಇರುವ ಐಶ್ವರ್ಯವು ಸ್ಥಿರವಾಗಿರಲಿ. ನಮ್ಮ ವಾಚಕರು ಶೀಲಭೂಷರಾಗಿಯೂ, ಗುಣೈಕನಿರತರಾಗಿಯೂ, ದೇವಬ್ರಾಹ್ಮಣಭಕ್ತರಾಗಿಯೂ ಇದ್ದು ಆಯುರಾರೋಗ್ಯಾದಿ ಸಕಲಶ್ರೇಯಸ್ಸನ್ನು ಪಡೆಯಲಿ.

|| ಭಾಮಿನೀಷಟ್ಪದಿ ||

ಈಷಣತ್ರಯಬಾಧ್ಯನಲ್ಲದ |
ಶೇಷಭೂಮಿಾಮಂಡಲೋತ್ತಮ |
ಭೂಷಣಂ ಮದ್ದೂರುಕುಲಜಶ್ರೀಮಹಾದೇವ ||
ದೋಷವಿದ್ವರನಾದ್ಯತನಯಮ |
ನೀಷಿವರನರಸಿಂಹತನುಜರು |
ಶೇಷನಾರಾಯಣನು ತದನುಜರಾಮಶೇಷಾಖ್ಯಂ || ೧ ||

ಕೃತಿಯ ರಚಿಸಿದ ನೋಡಿದೊಡೆ ಗುರು |
ಮತಿಗಳಿದರೊಳ್ಕುಂದುಸಟೆಗಳ |
ತತಿಗಳಿರ್ದೊಡೆ ಮನ್ನಿಸುವುದೆಮ್ಮನು ಮಹಾಕೃಪೆಯಿಂ ||
ಸತತವಿಶ್ವಾವಸುವಿನಂತಹ |
ಪಾತಿಗಳ್ಗುಣಪಕ್ಷದೊಳ್ನರ |
ತತಿತಮಸ್ತಿಮಿರಾರ್ಕರೆನಿಪುದು ಗುಣಗಳಂ ಮುದದಿಂ || ೨ ||

ಸಂಪೂರ್ಣಂ.

# ಶುದ್ಧಿಪತ್ರಿಕೆ.

---

| ಪುಟ. | ಬಂತಿ. | ಅಸಾಧು. | ಸಾಧು. |
|---|---|---|---|
| ೨ | ೧೧ | ಬಿಸಿಲುನಿಂದ | ಬಿಸಿಲಿನಿಂದ |
| ೩ | ೧೮ | ಸಂರಕ್ಷಿಸದ | ಸಂರಕ್ಷಿಸಿದ |
| ೫ | ೨೩ | ಶತೃ | ಶತ್ರು |
| ೭ | ೯ | ಬಯಿಸು | ಬಯಸು |
| ೧೦ | ೧೯ | ,, | ,, |
| ೮ | ೭ | ಶ್ರಮಸಹಿಷ್ಣುನಾದ | ಶ್ರಮಸಹಿಷ್ಣುವಾದ |
| ೯ | ೮ | ಬೆರಳುನಿಂದ | ಬೆರಳಿನಿಂದ |
| ೧೧ | ೧೯ | ವಕ್ಷಸ್ಥಲ | ವಕ್ಷಸ್ಸ್ಥಲ |
| ೪೧ | ೬ | ,, | ,, |
| ೪೮ | ೨ | ,, | ,, |
| ೮೫ | ೨೦ | ,, | ,, |
| ೧೧ | ೨೦ | ಬೆಳಿಸಿದ | ಬೆಳೆಯಿಸಿದ |
| ೧೩ | ೨ | ತ್ಮಕ | ತ್ಮಿಕ |
| ೧೧ | ೨೧ | ಎಲುಬ | ಎಲುಬು |
| ೧೭ | ೧೮ | ಅವನಗಿಂತಲೂ | ಅವನಿಗಿಂತಲೂ |
| ೨೦ | ೫ | ಪರಿಶುದ್ವ | ಪರಿಶುದ್ಧ |
| ೨೩ | ೧೨ | ನೆಂದ | ನನೆದ |
| ೨೪ | ೧೬. | ಬೆಳಿಗ್ಯೆ | ಬೆಳಗ್ಗೆ |
| ೨೯ | ೧೫ | ಸಂಹರಿಸವ | ಸಂಹರಿಸುವ |
| ೩೩ | ೧ | ಪತ್ರ | ಶತಪತ್ರ |

| ಪುಟ. | ಬಂತಿ. | ಅಸಾಧು. | ಸಾಧು. |
|---|---|---|---|
| ೪೨ | ೪ | ಬಬ್ಬ | ಒಬ್ಬ |
| ೫೩ | ೧೩ | ಜೋರರು | ಚೋರರು |
| ೫೭ | ೬ | ಹಲಸಿ | ಹಲಸು |
| ೬೦ | ೧೧ | ಲಿರಳೂ | ಲಿರುಳೂ |
| ೭೯ | ೧೪ | ,, | ,, |
| ೯೫ | ೧೨ | ,, | ,, |
| ೬೩ | ೧೦ | ರದ್ರ | ರುದ್ರ |
| ೬೯ | ೨೧ | ಕಲೋತಿ | ಕರೋತಿ |
| ,, | ೬ | ನಾರಾದಾದಿ | ನಾರದಾದಿ |
| ೬೧ | ೧೯ | ಬಳೆದ | ಬಳಿದ |
| ೭೧ | ೨೩ | ಸತ್ಪುರಷ | ಸತ್ಪುರುಷ |
| ೮೧ | ೧೬ | ಕಂದಫಲದಂತೆ | ತುಂಗೆಗಡ್ಡೆಯಂತೆ |
| ೮೪ | ೨೦ | ಧಡ | ದಡ |
| ೮೭ | ೯ | ನಿರಾಪ | ನಿರಪ |
| ೮೮ | ೧೭ | ಗಜಗಳದಂತೆ | ಗಜಗಳಂತೆ |
| ೯೧ | ೧ | ಇವರಗಿಂತಲೂ | ಇವರಿಗಿಂತಲೂ |
| ೧೦೪ | ೨೨ | ಬಳೆದು | ಬಳಿದು |
| ೧೦೮ | ೨೨ | ನಗುವೊಗ | ನಗೆವೊಗ |
| ೧೧೫ | ೬ | ನಾಲಿಗೆ | ನಾಲಗೆ |
| ೧೧೬ | ೧೧ | ,, | ,, |

*Note:—Any information regarding errors left unamended will be thankfully received.*

ಪ್ರತಿಗಳಿಗೆ ಕೆಳಗಿನವಿಳಾಸಕ್ಕೆ ಬರೆಯಿರಿ:—

ಎಂ. ಅನಂತನಾರಾಯಣಶಾಸ್ತ್ರೀ

೪೦, ಕೆರೆಬೀದಿ ಅರಳೇಪೇಟೆ,

ಬೆಂಗಳೂರು ಸಿಟಿ.